WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಡಿಸೆಂಬರ್ ೨೨, ೨೦೧೧ (ಪುಷ್ಯ ೧, ಶಕ ವರ್ಷ ೧೯೩೩) | ಸಂಚಿಕೆ ೫೦ |
| --- | --- | --- |

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಕಛೇರಿ ಉಪಯೋಗಕ್ಕಾಗಿ ಒಂದು ಹೊಸ ವಾಹನ ಖರೀದಿ ಬಗ್ಗೆ – ಮಂಜೂರಾತಿ.

**ಓದಲಾಗಿದೆ :**
1. ಪತ್ರ ಸಂಖ್ಯೆ ಜೀಪು–ಸಿ.ಆರ್. 74/06–07/48898/ಎ4, ದಿನಾಂಕ 12–04–2011.
2. ಪತ್ರ ಸಂಖ್ಯೆ ಜೀಪು–ಸಿ.ಆರ್. 74/06–07/48898/ಎ4, ದಿನಾಂಕ 16–08–2011.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಜಿಲ್ಲಾಧಿಕಾರಿಯ ಕಛೇರಿ ಉಪಯೋಗಕ್ಕಾಗಿ ಹಾಲಿ ಇರುವ ವಾಹನವು 1998ರಲ್ಲಿ ಖರೀದಿಸಿದ್ದು, 13 ವರ್ಷ ಹಳೆಯದಾಗಿದ್ದು 3 ಲಕ್ಷಕ್ಕಿಂತ ಅಧಿಕ ದೂರ ಕ್ರಮಿಸಿದ್ದು, ಪ್ರತಿ ಲೀಟರಿಗೆ 6 ಕಿ.ಮೀ. ಮೈಲೇಜ್ ನೀಡುತ್ತಿದ್ದು ದುರಸ್ಥಿಗಾಗಿ ರೂ.5.00 ಲಕ್ಷಕ್ಕಿಂತ ಮಿಗಿಲಾಗಿ ವೆಚ್ಚವಾಗಿರುವುದರಿಂದ ಇದನ್ನು ನಿರುಪಯುಕ್ತಗೊಳಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ವರದಿ ಮಾಡಿದ್ದಾರೆಂದು, ಜಿಲ್ಲೆಯಲ್ಲಿ ಪ್ರವಾಸಕ್ಕಾಗಿ ರಾಜ್ಯದ ರಾಜಧಾನಿಗೆ ಪ್ರವಾಸ ಮಾಡಲು ಅನುಕೂಲವಾಗುವಂತೆ ಹಳೆಯ ವಾಹನವನ್ನು ನಿರುಪಯುಕ್ತಗೊಳಿಸಿ ಅದಕ್ಕೆ ಬದಲಾಗಿ SX4 ZX1 ವಾಹನವನ್ನು ಅಥವಾ ಹುಂಡೈ ವರ್ನವನ್ನು ಖರೀದಿಸಲು ಮಂಜೂರಾತಿ ನೀಡುವುದರೊಂದಿಗೆ ಅನುದಾನ ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಹಾಗೂ

ಪ್ರಾದೇಶಿಕ ಸಾರಿಗೆ ಅಧಿಕಾರಿಯವರ ದೃಢೀಕರಣ ಪತ್ರ, ಹೊಸ ವಾಹನ ಖರೀದಿಗೆ ಧಾರಣೆಪಟ್ಟಿ ಮುಂತಾದ ದಾಖಲೆಗಳನ್ನು ಫ್ಯಾಕ್ಸ್ ಮೂಲಕ ಸರ್ಕಾರಕ್ಕೆ ರವಾನಿಸಿರುತ್ತಾರೆ.

ಈ ವಿಷಯವನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಕಛೇರಿ ಉಪಯೋಗಕ್ಕಾಗಿ ಹಾಲಿ ಇರುವ ಸಂಖ್ಯೆ ಕೆಇ 19 ಜಿ 3333 ವಾಹನವನ್ನು ನಿಯಮಾನುಸಾರ ನಿರುಪಯುಕ್ತಗೊಳಿಸಲು ಮತ್ತು ಅದಕ್ಕೆ ಬದಲಾಗಿ ರೂ.5.00 ಲಕ್ಷಗಳ (ತೆರಿಗೆ ಹೊರತುಪಡಿಸಿ) ವೆಚ್ಚದಲ್ಲಿ ಹೊಸ ವಾಹನವನ್ನು ಖರೀದಿಸಲು ಮಂಜೂರಾತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 38 ಎಂಎಸ್‌ಟಿ 2011, ಬೆಂಗಳೂರು, ದಿನಾಂಕ 13ನೇ ಅಕ್ಟೋಬರ್ 2011**

ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಕಛೇರಿ ಉಪಯೋಗಕ್ಕಾಗಿ ಹಾಲಿ ಇರುವ ಸಂಖ್ಯೆ ಕೆಇ 19 ಜಿ 3333 ವಾಹನವನ್ನು ನಿಯಮಾನುಸಾರ ನಿರುಪಯುಕ್ತಗೊಳಿಸಲು ಮಂಜೂರಾತಿ ನೀಡಲಾಗಿದೆ.

ಹಳೆಯ ವಾಹನಕ್ಕೆ ಬದಲಾಗಿ ರೂ.5.00 ಲಕ್ಷ (ರೂಪಾಯಿ ಐದು ಲಕ್ಷಗಳು ಮಾತ್ರ)ಗಳ (ತೆರಿಗೆ ಹೊರತುಪಡಿಸಿ) ವೆಚ್ಚದಲ್ಲಿ ಒಂದು ಹೊಸ ವಾಹನವನ್ನು ಖರೀದಿಸಲು ಮಂಜೂರಾತಿ ನೀಡಲಾಗಿದೆ.

ಹೊಸ ವಾಹನವನ್ನು ಖರೀದಿಸುವ ಸಂದರ್ಭದಲ್ಲಿ ಇಂಧನ ಮಿತವ್ಯಯ ಹಾಗೂ ನಿರ್ವಹಣಾ ವೆಚ್ಚ ಕಡಿಮೆ ಹೊಂದಿರುವ ವಾಹನಗಳನ್ನು ಡಿ.ಜೆ.ಎಸ್.ಡಿ. ದರಗಳಿಗೆ ಒಳಪಟ್ಟು ಖರೀದಿಸತಕ್ಕದ್ದು.

ಹೊಸ ವಾಹನ ಖರೀದಿಗೆ ತಗಲುವ ವೆಚ್ಚವನ್ನು ಈಗಾಗಲೇ ಬಿಡುಗಡೆ ಮಾಡಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 782 ವೆಚ್ಚ–7/2011, ದಿನಾಂಕ 19–09–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶ್ರೀರಾಮರೆಡ್ಡಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ).

ಪಿ.ಆರ್.ನಂ. 2570

**ಕಂದಾಯ ಸಚಿವಾಲಯ**

**ವಿಷಯ :** ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಗ್ರಾಮದ ಅರಣ್ಯ ಮತ್ತು ಕಂದಾಯ ಜಮೀನಿನ ಸರ್ವೆ ಕಾರ್ಯ ನಡೆಸುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರ ಪತ್ರ ಸಂಖ್ಯೆ : ಗಣಿ 137 2005-06, ದಿನಾಂಕ 02-07-2011 ಮತ್ತು 27-08-2011.
2. ಮಾನ್ಯ ಲೋಕಾಯುಕ್ತರು ರಾಜ್ಯದಲ್ಲಿನ ಅಕ್ರಮ ಗಣಿಗಾರಿಕೆ ಕುರಿತು ತನಿಖೆ ನಡೆಸಿ ನೀಡಿರುವ ವರದಿ.
3. ಸರ್ಕಾರಿ ಆದೇಶ ಸಂಖ್ಯೆ : ಕಂಇ 103 ಭೂದಾಸ 2008, ದಿನಾಂಕ 05-09-2011.
4. ಸರ್ಕಾರಿ ಆದೇಶ ಸಂಖ್ಯೆ : ಅಪಜೀ 28 ಎಫ್‌ಎಎಫ್ 2010, ದಿನಾಂಕ 22-09-2011.

**ಪ್ರಸ್ತಾವನೆ :**

ಮಾನ್ಯ ಲೋಕಾಯುಕ್ತರು ರಾಜ್ಯದಲ್ಲಿನ ಅಕ್ರಮ ಗಣಿಗಾರಿಕೆ ಕುರಿತು ತನಿಖೆ ನಡೆಸಿ ನೀಡಿರುವ ವರದಿಯಲ್ಲಿ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಗ್ರಾಮದ 1903ರ ಗ್ರಾಮ ನಕ್ಷೆ ಪ್ರಕಾರ ಸರ್ವೆ ನಂಬರ್ 1 ರಿಂದ 4 ವಿಸ್ತೀರ್ಣ 9.00 ಎಕರೆ ಮಾತ್ರ ಇರುತ್ತದೆ. ಆದರೆ ಇದರಲ್ಲಿ ಅನಧಿಕೃತವಾಗಿ ಸರ್ವೆ ನಂಬರ್ 5 ರಿಂದ 35 ನ್ನು ಸೃಜಿಸಲಾಗಿರುತ್ತದೆ. ಈ ಹಕ್ಕುದಾರಿಕೆಯನ್ನು ನಕಲಿ ಭೂ ಮಂಜೂರಾತಿ ದಾಖಲೆಗಳನ್ನು ಆಧರಿಸಿ ಹಾಗೂ ಕಂದಾಯ ಇಲಾಖೆಯ ಸಿಬ್ಬಂದಿಯು ಶಾಮೀಲಾಗಿ ಸೃಷ್ಟಿಸಲಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಮಾನ್ಯ ಲೋಕಾಯುಕ್ತರ ವರದಿಯಲ್ಲಿ ನಮೂದಿಸಿರುವ ಸಿಸ್ಟರ್ ರೋಸಿಲಿ, ಸುಪೀರಿಯರ್, ಗುಡ್ ಷೆಫರ್ಡ್ ಕಾನ್ವೆಂಟ್, ಬಳ್ಳಾರಿ ಇವರು ಅಕ್ರಮವಾಗಿ ಮಾರಾಟ ಮಾಡಿರುವ ಜಮೀನು ಸಹಾ ಇದರಲ್ಲಿ ಒಳಗೊಂಡಿದೆ (ಸರ್ವೆ ನಂಬರ್ 17-18) ಇದಲ್ಲದೆ ಉಪ ವಿಭಾಗಾಧಿಕಾರಿ, ಬಳ್ಳಾರಿ ಹಾಗೂ ಅರಣ್ಯ ಕ್ಷೇತ್ರ ನಿರ್ಧರಣಾಧಿಕಾರಿ ಇವರು ಕಾನೂನು ಬಾಹಿರವಾಗಿ ಅರಣ್ಯ ಪ್ರದೇಶದಿಂದ ಹೊರತುಪಡಿಸಿ ಆದೇಶಿಸಿರುವ 265 ಎಕರೆ ಜಮೀನು (ಎನ್‌ಕ್ಲೋಸರ್-ಹೆಚ್) ಸಹಾ ಇದರಲ್ಲಿ ಸೇರಿದೆ.

ಬಳ್ಳಾರಿ ಜಿಲ್ಲಾಧಿಕಾರಿಗಳು ದಿನಾಂಕ 27-8-2011 ರಂದು ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಬ್ಲಾಕ್‌ಗೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 4 ರನ್ವಯ ಹೊರಡಿಸಿರುವ ಅಧಿಸೂಚನೆಯಂತೆ ಅರಣ್ಯ ಗಡಿಗಳನ್ನು ಅರಣ್ಯ ಕ್ಷೇತ್ರ ನಿರ್ಧರಣಾಧಿಕಾರಿಗಳು ಗುರುತಿಸಬೇಕಾಗಿರುತ್ತದೆ ಎಂದು ತಿಳಿಸಿದ್ದಾರೆ.

ಈ ಹಿಂದಿನ ಅರಣ್ಯ ಕ್ಷೇತ್ರ ನಿರ್ಧರಣಾಧಿಕಾರಿಗಳು ಹೊರಡಿಸಿದ್ದ ದಿನಾಂಕ 24-5-2010ರ ಆದೇಶವನ್ನು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಆದೇಶದ ಮೂಲಕ ರದ್ದುಪಡಿಸಲಾಗಿದೆ. ಅಲ್ಲದೆ ಅರಣ್ಯ ಇಲಾಖೆಯು ಕ್ರಸಂ. (4)ರಲ್ಲಿ ಓದಲಾದ ಆದೇಶದಲ್ಲಿ ಬಳ್ಳಾರಿ ಜಿಲ್ಲಾಧಿಕಾರಿಗಳನ್ನು ರಾಮಘಡ ಬ್ಲಾಕ್‌ನ ಅರಣ್ಯ ಕ್ಷೇತ್ರವನ್ನು ಜಂಟಿ ಸರ್ವೆ ಮೂಲಕ ಗಡಿ ಗುರುತಿಸಲು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 4(1)(ಸಿ) ಪ್ರಕಾರ ಅರಣ್ಯ ವ್ಯವಸ್ಥಾಪನಾಧಿಕಾರಿಯನ್ನಾಗಿ ನೇಮಿಸಿದೆ.

ಈ ಹಿನ್ನೆಲೆಯಲ್ಲಿ ರಾಮಘಡ ಗ್ರಾಮದ ಮೂಲ ಸರ್ವೆ ನಂ. 1 ರಿಂದ 4 ಅನ್ನು ಹೊರತುಪಡಿಸಿ, ಉಳಿದ ಎಲ್ಲಾ ಪ್ರದೇಶವನ್ನು ಹಾಗೂ ಈ ಹಿಂದಿನ ಸಂಡೂರು ಮಹಾರಾಜರು ರಾಜ್ಯ ಸರ್ಕಾರಕ್ಕೆ ಹಸ್ತಾಂತರಿಸಿರುವ ಜಮೀನು ಒಳಗೊಂಡಂತೆ ಪೂರ್ಣ ಸರ್ವೆ ಮತ್ತು ಸೆಟಲ್‌ಮೆಂಟ್ ಮಾಡಲು ಸರ್ಕಾರ ನಿರ್ಧರಿಸಿದೆ. ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 219 ಭೂದಾಸೇ (3) 2011, ಬೆಂಗಳೂರು, ದಿನಾಂಕ 10ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 106 ರನ್ವಯ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಬ್ಲಾಕ್‌ನಲ್ಲಿ ಈ ಕೆಳಗೆ ತಿಳಿಸಿದ ಕ್ಷೇತ್ರವನ್ನು ಜಂಟಿ ಸರ್ವೆ ಮೂಲಕ ಗುರುತಿಸಿ ಸೆಟಲ್‌ಮೆಂಟ್ ಮಾಡುವಂತೆ ಜಿಲ್ಲಾಧಿಕಾರಿ, ಬಳ್ಳಾರಿ ಇವರಿಗೆ ಆದೇಶಿಸಿದೆ.

ಅ) ಅಧಿಸೂಚನೆ ಸಂಖ್ಯೆ : ಎಫ್‌ಎಫ್‌ಡಿ 29 ಎಫ್‌ಎಎಫ್ 84, ದಿನಾಂಕ 28-02-1985 ರಲ್ಲಿ ಒಳಗೊಂಡಿರುವ ಕ್ಷೇತ್ರ.

ಆ) ಅನಧಿಕೃತವಾಗಿ ಸೃಜಿಸಲಾಗಿರುವ ಸರ್ವೆ ನಂಬರ್ 5 ರಿಂದ 35 ರವರೆಗಿನ ಕ್ಷೇತ್ರ

ಇ) ಈ ಹಿಂದಿನ ಸಂಡೂರು ಮಹಾರಾಜರು ರಾಜ್ಯ ಸರ್ಕಾರಕ್ಕೆ ಹಸ್ತಾಂತರಿಸಿರುವ ರಾಮಘಡ ಬ್ಲಾಕ್‌ನ 2395.40 ಎಕರೆ ಕ್ಷೇತ್ರ.

ಈ ಸರ್ವೆ ಕಾರ್ಯಕ್ಕೆ ಅಗತ್ಯವಾದ ತಂಡವನ್ನು ಜಂಟಿಯಾಗಿ ಕಂದಾಯ ಮತ್ತು ಅರಣ್ಯ ಇಲಾಖೆ ಸರ್ವೆಯರ್‌ಗಳೊಂದಿಗೆ ರಚಿಸುವುದು. ಈ ತಂಡದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿನ ಸರ್ವೇಯರ್‌ಗಳನ್ನು ಹೊರತುಪಡಿಸಿ ಬೇರೆ ಜಿಲ್ಲೆಗಳ ಸರ್ವೇಯರ್‌ಗಳನ್ನು ನಿಯೋಜಿಸುವುದು.

ಈ ಸರ್ವೆ ಮತ್ತು ಸೆಟಲ್‌ಮೆಂಟ್ ಕಾರ್ಯವನ್ನು ಆರು ತಿಂಗಳುಗಳ ಅವಧಿಯೊಳಗೆ ಪೂರ್ಣಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಶೋಕ ಕುಮಾರ್ ಸಿ. ಮನೋಳಿ,**

ಪಿ.ಆರ್.ನಂ. 2571

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಕಂದಾಯ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಗೋಣಹಳ್ಳಿ ಗ್ರಾಮದ ಶ್ರೀ ಮಾರಮ್ಮ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ : ಎಡಿಎಂ/5/ಸಿಆರ್/ 32/2008-09, ದಿನಾಂಕ 26-07-2011.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ 26-07-2011 ರಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಗೋಣಹಳ್ಳಿ ಗ್ರಾಮದ ಶ್ರೀ ಮಾರಮ್ಮ ದೇವಸ್ಥಾನವು ಮುಜರಾಯಿ ಸಂಸ್ಥೆಯಾಗಿದ್ದು, ಸದರಿ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವಂತೆ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆರವರು ವರದಿ ಸಲ್ಲಿಸಿರುತ್ತಾರೆ. ಏತನ್ಮಧ್ಯೆ, ಸದರಿ ದೇವಾಲಯದ ಅರ್ಚಕರಾದ ಶ್ರೀ ಮಾರನಾಯ್ಕ ಎಂಬುವವರು ಕೆಲವೊಂದು ದಾಖಲೆಗಳನ್ನು ಹಾಜರುಪಡಿಸಿ, ದಿನಾಂಕ 16-10-2010 ರ ನಂತರ ಪೂಜಾ ಸರದಿಯನ್ನು ತನಗೇ ವಹಿಸಿಕೊಡುವಂತೆ ಕೋರಿರುತ್ತಾರೆ. ಅರ್ಚಕರು ಹಾಜರು ಪಡಿಸಿದ ದಾಖಲೆಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆರವರು ಪರಿಶೀಲಿಸಿ, ಶ್ರೀ ಮಾರಮ್ಮ ದೇವಸ್ಥಾನವು 1954 ರಿಂದಲೇ ಮುಜರಾಯಿ ಸಂಸ್ಥೆಯಾಗಿರುವುದು ಕಂಡುಬರುತ್ತದೆ ಎಂದು ತಿಳಿಸಿರುತ್ತಾರೆ. ಆದುದರಿಂದ ಸದರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ, ಆದೇಶವನ್ನು ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 73 ಮುಆಬಿ 2011, ಬೆಂಗಳೂರು, ದಿನಾಂಕ 10ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಗೋಣಹಳ್ಳಿ ಗ್ರಾಮದ ಶ್ರೀ ಮಾರಮ್ಮ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಸೆಕ್ಷನ್ 23ರ ಅನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಎಸ್. ಶ್ರೀಕಂಠಬಾಬು,**
ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್.ನಂ. 2572

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 118(ಎ) ರನ್ವಯ ಬಳ್ಳಾರಿ ತಾಲ್ಲೂಕು, ಸೋಮಸಮುದ್ರ ಗ್ರಾಮದ ಸರ್ವೆ ನಂ. 79, 500, 516, 281 ಹಾಗೂ 45 ಇವುಗಳ ಮಾಜಿ ಭೂ ಮಾಲೀಕರಿಗೆ ಹೆಚ್ಚಾಗಿ ಪಾವತಿಸಿರುವ ಪರಿಹಾರ ಧನ ರೂ. 79,072/-ಗಳನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ, ಇವರ ಪತ್ರ ಸಂ:ಕಂ/ಪ್ರಾಆಗು/ಅಪೀಲು/31/2008-09/4066 ದಿನಾಂಕ : 30-10-2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ, ಇವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 118(ಎ) ರನ್ವಯ ಬಳ್ಳಾರಿ ತಾಲ್ಲೂಕು, ಸೋಮಸಮುದ್ರ ಗ್ರಾಮದ ಸರ್ವೆ ನಂ. 79, 500,516, 281 ಹಾಗೂ 45 ಇವುಗಳ ಮಾಜಿ ಭೂ ಮಾಲೀಕರಿಗೆ ಭೂ ನ್ಯಾಯ ಮಂಡಳಿ, ಬಳ್ಳಾರಿ, ಇವರು ರೂ. 79,072-00 (ಎಪ್ಪತ್ತೊಂಬತ್ತು ಸಾವಿರದ ಎಪ್ಪತ್ತೆರಡು ರೂಪಾಯಿಗಳು ಮಾತ್ರ) ಗಳನ್ನು ಹೆಚ್ಚಾಗಿ ಪಾವತಿ ಮಾಡಲಾಗಿದ್ದು, ಕರ್ನಾಟಕ ಉಚ್ಚ ನ್ಯಾಯಾಲಯ ಪ್ರಕರಣ ಸಂಖ್ಯೆ : 37593/93 ರಲ್ಲಿ ನೀಡಿದ ಆದೇಶದಂತೆ ಪರಸ್ಪರ ಒಡಂಬಡಿಕೆ ಆಧರಿಸಿ ಮಾಜಿ ಭೂ ಮಾಲೀಕರಿಗೆ ತಹಸೀಲ್ದಾರರು, ಬಳ್ಳಾರಿ, ಇವರು ಪರಿಹಾರ ಧನ ಪಾವತಿಸಿ ಉಚ್ಚ ನ್ಯಾಯಾಲಯ ನಿಂದನೆ ಅರ್ಜಿ ಸಂ:ಸಿ.ಪಿ.ಸಿ. 49/95 ದಿನಾಂಕ : 27-02-1996 ರಂದು ವಿಲೇಗೊಳಿಸಿರುವುದಾಗಿ ತಿಳಿಸುತ್ತಾ, ಹೆಚ್ಚಾಗಿ ಪಾವತಿ ಮಾಡಿರುವ ರೂ. 79,072/- ಗಳನ್ನು ಮನ್ನಾ ಮಾಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಭೂ ನ್ಯಾಯ ಮಂಡಳಿ, ಬಳ್ಳಾರಿ, ಇವರು ಹೆಚ್ಚುವರಿಯಾಗಿ ಪಾವತಿಸಿರುವ ರೂ. 79,072/- ಗಳನ್ನು ಸರ್ಕಾರದ ಆದೇಶ ಸಂ : ಆಇ 1 ಟಿಎಫ್‌ಪಿ 2002 ದಿನಾಂಕ : 20-01-2003ರ ಐಟಂ 32 ರಂತೆ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಸೂಲು ಮಾಡಲಾಗದ ಸಾಲ ಅಥವಾ ರಾಜಸ್ವವನ್ನು ಪ್ರತಿ ಪ್ರಕರಣದಲ್ಲಿ ರೂ. 2.00 ಲಕ್ಷಗಳಂತೆ ಒಟ್ಟು 1 ವರ್ಷಕ್ಕೆ ರೂ. 10.00 ಲಕ್ಷಗಳವರೆಗೆ ಮನ್ನಾ ಮಾಡಲು ಅವಕಾಶವಿರುವುದರಿಂದ ಸದರಿ ಮೊತ್ತವನ್ನು ಸರ್ಕಾರವು ಮನ್ನಾ ಮಾಡಲು ನಿರ್ಧರಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 31 ಎಲ್‌ಆರ್‌ಎಂ 2009 ಬೆಂಗಳೂರು, ದಿನಾಂಕ: 12-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 118(ಎ) ರನ್ವಯ ಬಳ್ಳಾರಿ ತಾಲ್ಲೂಕು, ಸೋಮಸಮುದ್ರ ಗ್ರಾಮದ ಸರ್ವೆ ನಂ. 79, 500, 516, 281 ಹಾಗೂ 45 ಇವುಗಳ ಮಾಜಿ ಭೂಮಾಲೀಕರಿಗೆ ಹೆಚ್ಚಾಗಿ ಪಾವತಿಸಿರುವ ಪರಿಹಾರ ಧನ ರೂ. 79,072/-(ಎಪ್ಪತ್ತೊಂಬತ್ತು ಸಾವಿರದ ಎಪ್ಪತ್ತೆರಡು ರೂಪಾಯಿಗಳು ಮಾತ್ರ) ಗಳನ್ನು ಮನ್ನಾ ಮಾಡಿ ಆದೇಶಿಸಲಾಗಿದೆ.

ಹೆಚ್ಚುವರಿಯಾಗಿ ರೂ. 79,072/- (ಎಪ್ಪತ್ತೊಂಬತ್ತು ಸಾವಿರದ ಎಪ್ಪತ್ತೆರಡು ರೂಪಾಯಿಗಳು ಮಾತ್ರ)ಗಳ ಪರಿಹಾರ ಧನವನ್ನು ಪಾವತಿಸಲು ಕಾರಣರಾದ ಅಧಿಕಾರಿ/ಸಿಬ್ಬಂದಿಯವರನ್ನು ಗುರುತಿಸಿ ಹೆಚ್ಚುವರಿಯಾಗಿ ಪಾವತಿಯಾಗಿರುವ ಮೊತ್ತವನ್ನು ಅವರಿಂದ ನಿಯಮಾನುಸಾರ ವಸೂಲಿ ಮಾಡಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂ : ಆಇ 1 ಟಿಎಫ್‌ಪಿ 2002 ದಿನಾಂಕ : 20-01-2003ರಲ್ಲಿನ ಐಟಂ 32 ರನ್ವಯ ಹಾಗೂ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 588-ವೆಚ್ಚ-7/2011 ದಿನಾಂಕ : 22-08-2011 ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನಾರಾಯಣ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಸು)

ಪಿಆರ್.ನಂ. 2573

## ಕಂದಾಯ ಸಚಿವಾಲಯ

**ವಿಷಯ :** ಧಾರವಾಡ ನಗರದ ಶಹರ ಮಾಳಮಡ್ಡಿ ಬಡಾವಣೆಯ ಸಿಟಿಎಸ್ ನಂ. 134/1ಎ ರಲ್ಲಿನ 6 ಎಕರೆ 19 ಗುಂಟೆ ಜಮೀನನ್ನು ಕರ್ನಾಟಕ ಎಜುಕೇಶನ್ ಬೋರ್ಡಿಗೆ ಖಾಯಂ ಆಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ. ಸಿಆರ್. 58/2007-08 ದಿನಾಂಕ : 27-04-2011.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಧಾರವಾಡ ರವರ ಓದಲಾದ ದಿನಾಂಕ : 27-04-2011ರ ಪತ್ರದಲ್ಲಿ ಧಾರವಾಡ ನಗರದ ಶಹರ ಮಾಳಮಡ್ಡಿ ಬಡಾವಣೆಯ ಸಿಟಿಎಸ್ ನಂ. 134/1ಎ ರಲ್ಲಿನ 6 ಎಕರೆ 19 ಗುಂಟೆ ಜಮೀನನ್ನು ಕರ್ನಾಟಕ ಎಜುಕೇಶನ್ ಬೋರ್ಡ್ ರವರಿಗೆ ಇಸವಿ 1952ರಲ್ಲಿ ಖಾಯಂ ಮಂಜೂರು ಮಡುವ ಬಗ್ಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿರುತ್ತದೆ. ಈಗ ಸದರಿ ಜಮೀನನ್ನು ಖಾಯಂ ಆಗಿ ಮಂಜೂರು ಮಾಡಬೇಕೆಂಬುದು ಸಂಸ್ಥೆಯ ಕೋರಿಕೆಯಾಗಿರುತ್ತದೆ. ಕರ್ನಾಟಕ ಎಜುಕೇಶನ್ ಬೋರ್ಡಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ನೀಡಲಾಗಿರುವ ಸದರಿ ಜಮೀನನ್ನು ಅದರ ಭೂ ಮೌಲ್ಯ 3,30,60,625/- (ಮೂರು ಕೋಟಿ ಮೂವತ್ತು ಲಕ್ಷದ ಅರವತ್ತು ಸಾವಿರದ ಆರು ನೂರ ಇಪ್ಪತ್ತೈದು ರೂಪಾಯಿಗಳು) ಪಾವತಿಸಲು ಸಂಸ್ಥೆಯವರು ಲಿಖಿತ ಒಪ್ಪಿಗೆಯನ್ನು ಸಲ್ಲಿಸಿರುವರೆಂದು ವರದಿ ಮಾಡುತ್ತಾ, ಸದರಿ ಜಮೀನನ್ನು ಸಂಸ್ಥೆಯವರಿಗೆ ಖಾಯಂ ಆಗಿ ಮಂಜೂರು ಮಾಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ : 33 : ಎಲ್‌ಜಿಡಿ : 2008, ಬೆಂಗಳೂರು, ದಿನಾಂಕ : 15-10-2011**

ಕರ್ನಾಟಕ ಎಜುಕೇಶನ್ ಬೋರ್ಡ್ ಧಾರವಾಡ ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿದ್ದ ಧಾರವಾಡ ನಗರದ ಮಾಳಮಡ್ಡಿ ಬಡಾವಣೆಯ ಸಿಟಿಎಸ್ ನಂ. 134/1ಎ ಕ್ಷೇತ್ರ 6 ಎಕರೆ 19 ಗುಂಟೆ ಜಮೀನನ್ನು ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇ. 50 ರಷ್ಟು ದರವನ್ನು ಹಾಗೂ ನಿಯಮಾನುಸಾರ ಇತರೆ ವೆಚ್ಚಗಳನ್ನು ವಿಧಿಸಿ ಶೈಕ್ಷಣಿಕ ಉದ್ದೇಶಕ್ಕಾಗಿ ಖಾಯಂ ಆಗಿ ಮಂಜೂರು ಮಾಡಲು ಸರ್ಕಾರದ ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : 661 ವೆಚ್ಚ-7/2011 ದಿನಾಂಕ : 03-08-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ-3)

ಪಿ.ಆರ್. 2574

## ಕಂದಾಯ ಸಚಿವಾಲಯ

**ವಿಷಯ :** ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಸರ್ಕಾರಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ರವರ ಪತ್ರ ಸಂಖ್ಯೆ : ಕಂ/ಭೂಮಿ/ಅ/381/2010-11 ದಿನಾಂಕ : 15-03-2010 ಮತ್ತು 06-04-2011.

**ಪ್ರಸ್ತಾವನೆ:**

1) ಮೇಲೆ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಹಂಗನಹಳ್ಳಿ ಗ್ರಾಮದ ವಿವಿಧ ಸ.ನಂಬರುಗಳ ಒಟ್ಟು ವಿಸ್ತೀರ್ಣ 24.09 ಎಕರೆ ಸರ್ಕಾರಿ ಜಮೀನನ್ನು ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಜಮೀನು ಮಂಜೂರು ಮಾಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2) ಸೇಡಂ ತಾಲ್ಲೂಕಿನ ಹಂಗನಹಳ್ಳಿ ಗ್ರಾಮದಲ್ಲಿ ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ಇವರು ಕೈಗಾರಿಕಾ ಉದ್ದೇಶಕ್ಕಾಗಿ ಖಾಸಗಿಯವರಿಂದ ಈ ಕೆಳಕಂಡ ಜಮೀನುಗಳು ಖರೀದಿಸಿದ್ದು, ಇವುಗಳು ಮಧ್ಯದಲ್ಲಿ ಇರುವ ಸರ್ಕಾರಿ ಜಮೀನುಗಳ ವಿವರಗಳನ್ನು ಸಹ ಒದಗಿಸಿರುವರು. ಖರೀದಿಸಿರುವ ವಿವರ ಈ ಕೆಳಗಿನಂತಿದೆ.

1. ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ಇವರು ಮೊದಲಿನ ಹಂತದಲ್ಲಿ ಒಟ್ಟು 572.24 ಎಕರೆ ಜಮೀನು ಖರೀದಿಸಿರುತ್ತಾರೆ. ಹಂಗನಹಳ್ಳಿ ಗ್ರಾಮದ ಸ.ನಂ. 111/4 ರಲ್ಲಿ 0.31 ಎಕರೆ ಸರ್ಕಾರಿ ಜಮೀನು ಲಭ್ಯವಿದ್ದು ಖಾಸಗಿಯವರಿಂದ ಖರೀದಿಸಿದ ಜಮೀನಿನ ಮಧ್ಯದಲ್ಲಿ ಇರುತ್ತದೆ.
2. ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ಇವರು ಎರಡನೇ ಹಂತದಲ್ಲಿ ಒಟ್ಟು 402-12 ಎಕರೆ ಜಮೀನು ಖರೀದಿಸಿರುತ್ತಾರೆ. ಹಂಗನಹಳ್ಳಿ ಗ್ರಾಮ ಸ.ನಂ. 82, 89, 106/ಅ ರಲ್ಲಿ 23-18 ಎಕರೆ ಸರ್ಕಾರಿ ಜಮೀನು ಲಭ್ಯವಿದ್ದು, ಖಾಸಗಿಯವರಿಂದ ಖರೀದಿಸಿದ ಜಮೀನಿನ ಮಧ್ಯದಲ್ಲಿ ಇರುತ್ತದೆ.
3. ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ಇವರು ಖರೀದಿಸಿರುವ ಖಾಸಗಿ ಜಮೀನಿನ ಮಧ್ಯದಲ್ಲಿ ಒಟ್ಟು 24-09 ಎಕರೆ ಸರ್ಕಾರಿ ಜಮೀನು ಇರುತ್ತದೆ.

3) ಖರೀದಿಸಿರುವ ಖಾಸಗಿ ಜಮೀನಿನ ಮಧ್ಯದಲ್ಲಿ ಇರುವ ಸರ್ಕಾರಿ ಜಮೀನನ್ನು ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ ಸಂಸ್ಥೆಯವರಿಗೆ ಮಂಜೂರು ಮಾಡಲು ಪ್ರಸ್ತಾಪಿಸಲಾಗಿದ್ದು ಈ ಜಮೀನು ಮಧ್ಯ ಸೇರುವಂತ ಸರ್ಕಾರಿ ಜಮೀನಾಗಿದ್ದು ಆರ್.ಟಿ.ಸಿ ಕಲಂ-9ರ ಪ್ರಕಾರ ಈ ಕೆಳಗಿನಂತೆ ವರ್ಗೀಕೃತಗೊಂಡಿರುತ್ತದೆ :-

| ಗ್ರಾಮ | ಸ.ನಂ. | ವಿಸ್ತೀರ್ಣ | ವರ್ಗೀಕೃತ ಜಮೀನು |
|---|---|---|---|
| 1. ಹಂಗನಹಳ್ಳಿ | 111/4 | 0.31 | ಸರ್ಕಾರಿ ಖರೀಜ ಖಾತಾ |
| 2. ಹಂಗನಹಳ್ಳಿ | 106/ಅ | 17.06 | ಸರ್ಕಾರಿ ಗಾಯರಾಣ |
| 3. ಹಂಗನಹಳ್ಳಿ | 99 | 0.30 | ಸರ್ಕಾರಿ ಖರೀಜ ಖಾತಾ |
| 4. ಹಂಗನಹಳ್ಳಿ | 82 | 5.22 | ಸರ್ಕಾರಿ ಪರಂಪೋಕು |
| ಒಟ್ಟು | | 24.09 | |

4) ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಹಂಗನಹಳ್ಳಿ ಗ್ರಾಮದಲ್ಲಿ ಒಟ್ಟು 1555 ಜಾನುವಾರುಗಳಿದ್ದು ಪ್ರತಿ 100 ಜಾನುವಾರುಗಳಿಗೆ 30 ಎಕರೆಯಂತೆ ಒಟ್ಟು 375 ಎಕರೆ ಅವಶ್ಯಕತೆ ಇರುತ್ತದೆ. ಆದರೆ ಸದರಿ ಗ್ರಾಮದಲ್ಲಿ 111.05 ಎಕರೆ ಜಮೀನು ಮಾತ್ರ ಲಭ್ಯವಿದ್ದು, ಜಾನುವಾರುಗಳಿಗೆ ಹುಲ್ಲುಗಾವಲಿಗಾಗಿ ಕೊರತೆ ಇರುತ್ತದೆ ಎಂದು ವರದಿ ಸಲ್ಲಿಸಿರುತ್ತಾರೆ. ಆದರೆ, ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ಇವರು ಈಗಾಗಲೇ ಖಾಸಗಿಯವರಿಂದ ಖರೀದಿಸಿದ ಜಮೀನುಗಳು ಗಾಯರಾಣ ಜಮೀನಾಗಿದ್ದು, ಸದರಿ ಕಾರ್ಖಾನೆಯವರು ಖರೀದಿಸಿದ ಜಮೀನುಗಳ ಸುತ್ತ ಅವರು ಕಾಂಪೌಂಡ್ ಗೋಡೆ ನಿರ್ಮಿಸಿಕೊಂಡಿದ್ದಲ್ಲಿ ಸದರಿ ಸರ್ಕಾರಿ ಜಮೀನುಗಳ ಹುಲ್ಲುಗಾವಲಿಗಾಗಿ ಉಪಯೋಗವಾಗುವುದಿಲ್ಲ. ಹಾಗೂ ಸದರಿ ಕಂಪನಿಯವರು ಸದರಿ ಸರ್ಕಾರಿ ಜಮೀನುಗಳನ್ನು ಅನಧಿಕೃತವಾಗಿ ಉಪಯೋಗಿಸಿಕೊಳ್ಳುವ ಸಂಭವವಿರುತ್ತದೆ. ಆದ್ದರಿಂದ ಸದರಿ ಸರ್ಕಾರಿ ಜಮೀನನ್ನು ಹುಲ್ಲುಗಾವಲಿಗಾಗಿ ಕಾಯ್ದಿರಿಸುವುದು ಸಮಂಜಸವೆನಿಸುವುದಿಲ್ಲವೆಂದು ತಿಳಿಸಿ, ಮೆ: ರಾಜಶ್ರೀ ಸಿಮೆಂಟ್ಸ್ ಲಿ., ರವರು ಕೈಗಾರಿಕಾ ಉದ್ದೇಶಕ್ಕಾಗಿ ಈಗಾಗಲೇ ಖಾಸಗಿ ಜಮೀನು ಖರೀದಿಸಿರುವ ಬೆಲೆಗೆ ಈ ಸರ್ಕಾರಿ ಭೂಮಿಯನ್ನು ಮಂಜೂರು ಮಾಡುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಅಲ್ಲದೆ ಪ್ರತಿ ಎಕರೆಗೆ ರೂ. 8,00,000-00 (ಎಂಟು ಲಕ್ಷ ಮಾತ್ರ) ಗಳಂತೆ ಸರ್ಕಾರಕ್ಕೆ ಭರಿಸುವುದಾಗಿ ಕಂಪನಿಯವರು ಒಪ್ಪಿಗೆ ನೀಡಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ : 3 ಎಲ್‌ಜಿಜಿ : 2010, ಬೆಂಗಳೂರು, ದಿನಾಂಕ: 24-09-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕಿನ ಹಂಗನಹಳ್ಳಿ ಗ್ರಾಮದ ಸ.ನಂ. 111/4ರಲ್ಲಿ 0.31 ಎ/ಗುಂಟೆ, ಸ.ನಂ. 106/ಅ ರಲ್ಲಿ 17.06 ಎ/ಗುಂಟೆ, ಸ.ನಂ. 99ರಲ್ಲಿ 0.30 ಎ/ಗುಂಟೆ ಮತ್ತು ಸ.ನಂ. 82ರಲ್ಲಿ 5.22 ಎ/ಗುಂಟೆ ಒಟ್ಟು 24-09 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22 ರನ್ವಯ ಸದರಿ ಜಮೀನಿಗೆ ಎಕರೆ ಒಂದಕ್ಕೆ ರೂ. 8,00,000-00 (ಎಂಟು ಲಕ್ಷ ಮಾತ್ರ) ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ, ಕೈಗಾರಿಕಾ ಉದ್ದೇಶಕ್ಕಾಗಿ, ಮೆ: ರಾಜಶ್ರೀ ಸಿಮೆಂಟ್ಸ್ ವರ್ಕ್ಸ್ (ಎ ಯುನಿಟ್ ಆಫ್ ಅಲ್ಟ್ರಾಟೆಕ್ ಸಿಮೆಂಟ್ಸ್ ಲಿಮಿಟೆಡ್) ಆದಿತ್ಯನಗರ, ಮಳಖೇಡ ರವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 482 ವೆಚ್ಚ-7/2011 ದಿನಾಂಕ : 20-05-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜೆ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ-3)

ಪಿಆರ್.ನಂ. 2575

## ಉನ್ನತ ಶಿಕ್ಷಣ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ : ಇಡಿ 63 ಯುಎನ್ಇ 2010, ಬೆಂಗಳೂರು ದಿನಾಂಕ : 18–10–2011**

**ವಿಷಯ :** ದಿನಾಂಕ : 01–06–1987ರ ಪೂರ್ವದಲ್ಲಿ ಪ್ರಾರಂಭವಾಗಿ ಅನುದಾನಕ್ಕೊಳಪಡಿಸಲಾದ ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿಗಳಿಗೆ ವೇತನಾನುದಾನ ಪಾವತಿ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಇಡಿ 176 ಯುಜಿವಿ 2004 (ಭಾಗ), ದಿನಾಂಕ : 19–05–2009.
2. ಸರ್ಕಾರಿ ಆದೇಶ ಸಂಖ್ಯೆ : ಇಡಿ 86 ಯುಎನ್ಇ 2010, ದಿನಾಂಕ : 25–03–2010.
3. ಸರ್ಕಾರಿ ಆದೇಶ ಸಂಖ್ಯೆ : ಇಡಿ 31 ಯುಎನ್ಇ 2010, ದಿನಾಂಕ : 05–03–2010.
4. ಸರ್ಕಾರಿ ಆದೇಶ ಸಂಖ್ಯೆ : ಇಡಿ 41 ಯುಎನ್ಇ 2010, ದಿನಾಂಕ : 05–03–2010.
5. ಸರ್ಕಾರಿ ಆದೇಶ ಸಂಖ್ಯೆ : ಇಡಿ 40 ಯುಎನ್ಇ 2010, ದಿನಾಂಕ : 05–03–2010.
6. ಸರ್ಕಾರಿ ಆದೇಶ ಸಂಖ್ಯೆ : ಇಡಿ 39 ಯುಎನ್ಇ 2010, ದಿನಾಂಕ : 05–03–2010.
7. ಸರ್ಕಾರಿ ಆದೇಶ ಸಂಖ್ಯೆ : ಇಡಿ 66 ಯುಎನ್ಇ 2010, ದಿನಾಂಕ : 30–03–2010.
8. ಸರ್ಕಾರಿ ಆದೇಶ ಸಂಖ್ಯೆ : ಇಡಿ 69 ಯುಎನ್ಇ 2010, ದಿನಾಂಕ : 31–03–2010.
9. ಸರ್ಕಾರಿ ಆದೇಶ ಸಂಖ್ಯೆ : ಇಡಿ 111 ಯುಎನ್ಇ 2010, ದಿನಾಂಕ : 07–04–2010.
10. ಸರ್ಕಾರಿ ಆದೇಶ ಸಂಖ್ಯೆ : ಇಡಿ 70 ಯುಎನ್ಇ 2010, ದಿನಾಂಕ : 31–03–2010.
11. ಸರ್ಕಾರಿ ಆದೇಶ ಸಂಖ್ಯೆ : ಇಡಿ 72 ಯುಎನ್ಇ 2010, ದಿನಾಂಕ : 29–03–2010.
12. ಸರ್ಕಾರಿ ಆದೇಶ ಸಂಖ್ಯೆ : ಇಡಿ 74 ಯುಎನ್ಇ 2010, ದಿನಾಂಕ : 30–03–2010.
13. ಸರ್ಕಾರಿ ಆದೇಶ ಸಂಖ್ಯೆ : ಇಡಿ 75 ಯುಎನ್ಇ 2010, ದಿನಾಂಕ : 31–03–2010.
14. ಸರ್ಕಾರಿ ಆದೇಶ ಸಂಖ್ಯೆ : ಇಡಿ 76 ಯುಎನ್ಇ 2010, ದಿನಾಂಕ : 30–03–2010.
15. ಸರ್ಕಾರಿ ಆದೇಶ ಸಂಖ್ಯೆ : ಇಡಿ 77 ಯುಎನ್ಇ 2010, ದಿನಾಂಕ : 31–03–2010.
16. ಸರ್ಕಾರಿ ಆದೇಶ ಸಂಖ್ಯೆ : ಇಡಿ 78 ಯುಎನ್ಇ 2010, ದಿನಾಂಕ : 06–04–2010.
17. ಸರ್ಕಾರಿ ಆದೇಶ ಸಂಖ್ಯೆ : ಇಡಿ 79 ಯುಎನ್ಇ 2010, ದಿನಾಂಕ : 25–03–2010.
18. ಸರ್ಕಾರಿ ಆದೇಶ ಸಂಖ್ಯೆ : ಇಡಿ 35 ಯುಎನ್ಇ 2010, ದಿನಾಂಕ : 05–03–2010.
19. ಸರ್ಕಾರಿ ಆದೇಶ ಸಂಖ್ಯೆ : ಇಡಿ 80 ಯುಎನ್ಇ 2010, ದಿನಾಂಕ : 31–03–2010.
20. ಸರ್ಕಾರಿ ಆದೇಶ ಸಂಖ್ಯೆ : ಇಡಿ 33 ಯುಎನ್ಇ 2010, ದಿನಾಂಕ : 05–03–2010.
21. ಸರ್ಕಾರಿ ಆದೇಶ ಸಂಖ್ಯೆ : ಇಡಿ 81 ಯುಎನ್ಇ 2010, ದಿನಾಂಕ : 29–03–2010.
22. ಸರ್ಕಾರಿ ಆದೇಶ ಸಂಖ್ಯೆ : ಇಡಿ 82 ಯುಎನ್ಇ 2010, ದಿನಾಂಕ : 29–03–2010.

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿನ, ಆದೇಶ ಭಾಗದಲ್ಲಿರುವ ಷರತ್ತುಗಳು ಸಂ.(9)ರಲ್ಲಿರುವ "ವೇತನಾನುದಾನವು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ" ಎಂಬುದನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು ಹಾಗೂ ಮೇಲೆ ಓದಲಾದ (2)ರಿಂದ (22)ರವರೆಗಿನ ಸರ್ಕಾರಿ ಆದೇಶಗಳಲ್ಲಿನ ಆದೇಶ ಭಾಗದಲ್ಲಿ ನಮೂದಿಸಿರುವ ಷರತ್ತುಗಳ ಜೊತೆಗೆ, "ವೇತನಾನುದಾನವು ಸಿಬ್ಬಂದಿ ನೇಮಕಗಳನ್ನು ಅನುಮೋದಿಸಿ ಹೊರಡಿಸಿದ ಸರ್ಕಾರಿ ಆದೇಶ ದಿನಾಂಕದಿಂದ ಮಾತ್ರ ಪಾವತಿಸಬೇಕು. ಯಾವುದೇ ಕಾರಣಕ್ಕೂ ದಿನಾಂಕ : 19–05–2009 ರಿಂದ ಬಾಕಿ ವೇತನ ಪಾವತಿಸಲು ಅವಕಾಶವಿರುವುದಿಲ್ಲ" ಎಂಬ ಷರತ್ತನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಈ ತಿದ್ದುಪಡಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 510 ವೆಚ್ಚ 8/2010, ದಿನಾಂಕ : 28–08–2010ರಲ್ಲಿ ನೀಡಿರುವ ಅಭಿಪ್ರಾಯದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 2576

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ : ಅಪಜೀ 178 ಅಪಸೇ 2009, ಬೆಂಗಳೂರು, ದಿನಾಂಕ : 13–10–2011**

ಸರ್ಕಾರದ ಆದೇಶ ಸಂಖ್ಯೆ : ಅಪಜೀ 178 ಅಪಸೇ 2009, ದಿನಾಂಕ : 04–08–2011ರ ಅನುಬಂಧದಲ್ಲಿನ ಆದೇಶದ ದಿನಾಂಕವನ್ನು 03–08–2010ರ ಬದಲಾಗಿ 04–08–2011 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

ಪಿ.ಆರ್. 2577

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಸಿಆಸುಇ 482 ಸಅಸೇ 2011, ಬೆಂಗಳೂರು, ದಿನಾಂಕ : 15–10–2011**

ಕಂದಾಯ ಇಲಾಖೆಯಲ್ಲಿ ಹೊಸದಾಗಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಫ್ ರೆಕಾರ್ಡ್ಸ್) ವಿಭಾಗವನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಜಿಸುವ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 482 ಸಅಸೇ 2011, ದಿನಾಂಕ : 13–10–2011ರ ಪ್ರಸ್ತಾವನೆಯ 5ನೇ ಸಾಲಿನಲ್ಲಿ "ಸಿ.ಆ.ಸು.ಇ. (ಇ–ಆಡಳಿತ) ವಿಭಾಗದ" ಎಂಬುದಕ್ಕೆ ಬದಲಾಗಿ " **ಕಂದಾಯ ಇಲಾಖೆಯ** " ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಪಿ. ಮೋಹನರಾಜ್**
ಸರ್ಕಾರದ ಉಪ ಕಾರ್ಯದರ್ಶಿ (ಸೇವೆಗಳು)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

ಪಿ.ಆರ್. 2578

## ಕಂದಾಯ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಆರ್‌ಡಿ 08 ಎಡಿಇ 2009, ಬೆಂಗಳೂರು, ದಿನಾಂಕ : 14–10–2011**

ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 08 ಎಡಿಇ 2009, ದಿನಾಂಕ : 03–09–2011ರ ಆದೇಶದ ಪ್ರಸ್ತಾವನೆ ಎಂದು ನಮೂದಿಸಿದ ಎರಡನೇ ಪುಟದ ಎರಡನೇ ಪ್ಯಾರಾದಲ್ಲಿರುವ " ಮೇಲೆ ಓದಲಾದ ಕ್ರಮ ಸಂಖ್ಯೆ 4ರ **ದಿನಾಂಕ : 19–06–2011** " ಎಂಬುದರ ಬದಲಾಗಿ **ದಿನಾಂಕ : 29–06–2011** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 2579

## ವಸತಿ ಸಚಿವಾಲಯ

**ವಿಷಯ** : ಗ್ರಾಮೀಣ ವಸತಿ ಯೋಜನೆಗಳಡಿಯಲ್ಲಿ ಅನರ್ಹ ಫಲಾನುಭವಿಗಳ ಉಚ್ಚಾಟನೆ ಮತ್ತು ಅರ್ಹ ಫಲಾನುಭವಿಗಳ ಸೇರ್ಪಡೆಗಾಗಿ ವಿಶೇಷ ಸಮಿತಿಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ** : 1) ದಿನಾಂಕ: 07.09.2011ರ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ರವರ ಪತ್ರ ಸಂಖ್ಯೆ: GMRGRHCL 05 SD 01 2011.

**ಪ್ರಸ್ತಾವನೆ:**

ರಾಜ್ಯ ಸರ್ಕಾರವು ರಾಜ್ಯಾದ್ಯಂತ ಬಡತನ ರೇಖೆಗಿಂತ ಕೆಳಗಿನ ಗ್ರಾಮೀಣ ಪ್ರದೇಶಗಳಲ್ಲಿನ ಫಲಾನುಭವಿಗಳಿಗಾಗಿ ಹಮ್ಮಿಕೊಂಡ ವಿವಿಧ ವಸತಿ ಯೋಜನೆಗಳಡಿಯಲ್ಲಿ ಫಲಾನುಭವಿಗಳ ಆಯ್ಕೆಯಲ್ಲಿ ಅಕ್ರಮಗಳಿಂದಾಗಿ ಅರ್ಹ ಫಲಾನುಭವಿಗಳು ಆಯ್ಕೆಯಾಗದೇ, ಅನರ್ಹ ಫಲಾನುಭವಿಗಳು ಆಯ್ಕೆಯಾಗುತ್ತಿದ್ದು, ಎಲ್ಲಾ ಅರ್ಹ ಫಲಾನುಭವಿಗಳಿಗೆ ಸರ್ಕಾರದ ಯೋಜನೆಗಳ ಪ್ರಯೋಜನ ದೊರೆಯುತ್ತಿಲ್ಲ. ಗ್ರಾಮ ಸಭೆಗಳು ಫಲಾನುಭವಿಗಳನ್ನು ಆಯ್ಕೆ ಮಾಡಿದ್ದರೂ ಕಾರಣಾಂತರಗಳಿಂದಾಗಿ ಅವು ಜಾಗೃತ ಸಮಿತಿಗಳಿಂದ ನಿಗದಿತ ಸಮಯದೊಳಗಾಗಿ ಪರಿಶೀಲನೆಯಾಗದೇ, ಪಟ್ಟಿಯನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸಲ್ಲಿಸಲಾಗುತ್ತಿಲ್ಲ. ಫಲಾನುಭವಿಗಳ ಆಯ್ಕೆಯಲ್ಲಿ ಅಕ್ರಮ ಅಥವಾ ಅವ್ಯವಹಾರ ಮತ್ತು ಆಯ್ಕೆ ಪಟ್ಟಿಯನ್ನು ಸಲ್ಲಿಸುವಲ್ಲಿ ಆಗುತ್ತಿರುವ ವಿಳಂಬವನ್ನು ತಡೆಗಟ್ಟಲು ಸರ್ಕಾರವು ಈ ಕೆಳಗಿನಂತೆ ಫಲಾನುಭವಿಗಳ ಅರ್ಹತಾ ಪರಿಶೀಲನೆ ಮತ್ತು ಆಯ್ಕೆ ಸಮಿತಿಯನ್ನು ರಚಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 148 ಹೆಚ್‌ಎಎಂ 2011, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2011.**

ಫಲಾನುಭವಿಗಳ ಪಟ್ಟಿಯನ್ನು ತಯಾರಿಸುವಲ್ಲಿ ಉಂಟಾಗುತ್ತಿರುವ ಅನಾವಶ್ಯಕ ವಿಳಂಬವನ್ನು ತಡೆಗಟ್ಟಲು ಈ ಕೆಳಗಿನಂತೆ "ಅರ್ಹತಾ ಪರಿಶೀಲನೆ ಮತ್ತು ಆಯ್ಕೆ ಸಮಿತಿಯನ್ನು" ಸೃಜಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| | | |
|---|---|---|
| 1. ಉಪ ವಿಭಾಗಾಧಿಕಾರಿಗಳು | : | ಅಧ್ಯಕ್ಷರು |
| 2. ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಹಣಾಧಿಕಾರಿ | : | ಉಪಾಧ್ಯಕ್ಷರು |
| 3. ತಹಶೀಲ್ದಾರರು | : | ಸದಸ್ಯರು |
| 4. ಸಮಾಜ ಕಲ್ಯಾಣಾಧಿಕಾರಿ | : | ಸದಸ್ಯರು |
| 5. ತಾಲ್ಲೂಕು ನೋಡಲ್ ಅಧಿಕಾರಿ | : | ಸದಸ್ಯರು |
| 6. ಸಂಬಂಧಪಟ್ಟ ಗ್ರಾಮ ಪಂಚಾಯತ್ ಅಭಿವೃದ್ಧಿ ಅಧಿಕಾರಿ/ಕಾರ್ಯದರ್ಶಿ | : | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯ ಜವಾಬ್ದಾರಿ ಮತ್ತು ಕರ್ತವ್ಯಗಳು ಈ ಕೆಳಗಿನಂತಿವೆ:

1. ಗ್ರಾಮ ಸಭೆಗಳು ನಿಗದಿತ ಅವಧಿಯೊಳಗಾಗಿ ಫಲಾನುಭವಿಗಳ ಆಯ್ಕೆ ಮಾಡಲು ವಿಫಲವಾದಲ್ಲಿ, ಫಲಾನುಭವಿಗಳ ಅರ್ಹತಾ ಪರಿಶೀಲನೆ ಮತ್ತು ಆಯ್ಕೆ ಸಮಿತಿಯು ನಿಯಮಾವಳಿಗಳ ಮೇರೆಗೆ ಅರ್ಹ ಫಲಾನುಭವಿಗಳ ಆಯ್ಕೆ ಮಾಡಿ, ಫಲಾನುಭವಿಗಳ ಪಟ್ಟಿಗೆ ಜಾಗೃತ ಸಮಿತಿಯ ಅನುಮೋದನೆ ಪಡೆಯುವುದು. ಕಾರಣಾಂತರಗಳಿಂದಾಗಿ ಜಾಗೃತ ಸಮಿತಿಯು ಫಲಾನುಭವಿಗಳ ಪಟ್ಟಿಯನ್ನು

ಅನುಮೋದಿಸದಿದ್ದಲ್ಲಿ, ಫಲಾನುಭವಿಗಳ ಅರ್ಹತಾ ಪರಿಶೀಲನೆ ಮತ್ತು ಆಯ್ಕೆ ಸಮಿತಿಯೇ ಪಟ್ಟಿಯನ್ನು ಅನುಮೋದಿಸಿ, ರಾಜೀವ್ ಗಾಂಧಿ ಗ್ರಾಮೀಣ ನಿಗಮದ ಅನುಮೋದನೆ ಪಡೆಯುವುದು. ಈ ಪ್ರಕ್ರಿಯೆ ಎರಡು ವಾರಗಳ ಕಾಲಾವಧಿಯಲ್ಲಿ ಪೂರ್ಣಗೊಳ್ಳಕ್ಕದ್ದು.

2. ವಿವಿಧ ವಸತಿ ಯೋಜನೆಗಳಡಿಯಲ್ಲಿ ಫಲಾನುಭವಿಗಳು ಆಯ್ಕೆಯಾಗಿ, ನಿಗಮದಿಂದ ಅನುಮೋದನೆ ಪಡೆದುಕೊಂಡ ನಂತರವೂ ಆಯ್ಕೆಯಲ್ಲಿ ಅಕ್ರಮ ಅಥವಾ ಅವ್ಯವಹಾರ ಕುರಿತು ದೂರು ಬಂದಲ್ಲಿ ಫಲಾನುಭವಿಗಳ ಅರ್ಹತಾ ಪರಿಶೀಲನೆ ಮತ್ತು ಆಯ್ಕೆ ಸಮಿತಿಯು ಫಲಾನುಭವಿಗಳ ಅರ್ಹತೆಯನ್ನು ಮರುಪರಿಶೀಲಿಸಿ, ಅನರ್ಹ ಫಲಾನುಭವಿಗಳ ಹೆಸರುಗಳನ್ನು ತೆಗೆದುಹಾಕಿ, ಅನುದಾನ ಬಿಡುಗಡೆಯಾಗದಿದ್ದಲ್ಲಿ, ವಸೂಲಿಗಾಗಿ ಕ್ರಮ ಕೈಗೊಂಡು, ನಿಗಮಕ್ಕೆ ವರದಿ ಮಾಡುವುದು.

3. ಸಾಮಾನ್ಯವಾಗಿ ನಿಗದಿಪಡಿಸಿದ ಗುರಿಗಿಂತ ಹೆಚ್ಚುವರಿಯಾಗಿ ವಿಶೇಷ ಪ್ರಕರಣವಾಗಿ ನೀಡಿರುವ ಮನೆಗಳ ಹಂಚಿಕೆಗಾಗಿ ಪ್ರಸ್ತಾಪಿಸಲ್ಪಟ್ಟ ಫಲಾನುಭವಿಗಳು (ಅ) ಸ್ವಂತ ನಿವೇಶನ ಹೊಂದಿರುವ ಬಗ್ಗೆ (ಬ) ಸ್ವಂತ ಮನೆ ಹೊಂದದಿರುವ ಬಗ್ಗೆ (ಇ) ಇತರ ಯಾವುದೇ ವಸತಿ ಯೋಜನೆಯಡಿ ವಸತಿ ಸೌಕರ್ಯ ಪಡೆಯದಿರುವುದನ್ನು ಮತ್ತು (ಈ) ಮನೆ ಹಂಚಿಕೆಗಾಗಿ ನಿಗದಿಪಡಿಸಿದ ಯಾವುದೇ ನಿಯಮವನ್ನು ಉಲ್ಲಂಘಿಸದೇ ಇರುವುದನ್ನು ಹಾಗೂ ಗ್ರಾಮ ಸಭೆಯಲ್ಲಿ ಪಾರದರ್ಶಕವಾಗಿ ಆಯ್ಕೆಯಾಗಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು. ಹೀಗೆ ತಯಾರಿಸಿದ ಪಟ್ಟಿಯನ್ನು ಫಲಾನುಭವಿಗಳ ಅರ್ಹತಾ ಪರಿಶೀಲನೆ ಮತ್ತು ಆಯ್ಕೆ ಸಮಿತಿಯು ನೇರವಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸಲ್ಲಿಸಿ ಅನುಮೋದನೆಯನ್ನು ಪಡೆದುಕೊಳ್ಳಬಹುದು.

4. ಯಾವುದೇ ವಸತಿ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಅವ್ಯವಹಾರ ನಡೆದಿರುವ ಬಗ್ಗೆ ಫಲಾನುಭವಿಗಳ ಅರ್ಹತಾ ಪರಿಶೀಲನೆ ಮತ್ತು ಆಯ್ಕೆ ಸಮಿತಿಯ ಗಮನಕ್ಕೆ ಬಂದಲ್ಲಿ ಕೂಡಲೇ ತನಿಖೆ ಕೈಗೊಂಡು ಅವರ ಮೇಲೆ ಮುಂದಿನ ಕ್ರಮ ಕೈಗೊಳ್ಳಲು ಸಂಬಂಧಪಟ್ಟವರಿಗೆ ತಿಳಿಸಿ ನಿಗಮಕ್ಕೆ ವರದಿ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2580

**ಜಿ. ವೆಂಕಟೇಶನ್**

ಪೀಠಾಧಿಕಾರಿ-2(ಪ್ರ), ವಸತಿ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ದಾವಣಗೆರೆ ಜಿಲ್ಲೆಯ ಹೊನ್ನಾಳಿ ಕಂದಾಯ ತಾಲ್ಲೂಕಿನಲ್ಲಿನ ಹೆಚ್ಚುವರಿ ನೋಟರಿ ಹುದ್ದೆ ಭರ್ತಿ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಲಾ 130 ಎಲ್‌ಸಿಎಲ್ 2008 ದಿನಾಂಕ: 12-01-2010.

2) ಸರ್ಕಾರದ ಪತ್ರ ಸಂಖ್ಯೆ: ಲಾ 40 ಎಲ್‌ಸಿಎಲ್ 2010 ದಿನಾಂಕ: 08-02-2010.

3) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರ ಪತ್ರ ಸಂಖ್ಯೆ: ಡಿಜೆ/ಡಿವಿಜಿ/3150/2010 ದಿನಾಂಕ: 01-06-2010

4) ನೋಟರಿಗಳ ತಿದ್ದುಪಡಿ ನಿಯಮಗಳು, 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114 (ಇ) ದಿನಾಂಕ: 24-02-2009

5) ಅಧಿಸೂಚನೆ ಸಂಖ್ಯೆ: ಲಾ 61 ಎಲ್ ಸಿಎಲ್ 2009 ದಿನಾಂಕ: 18-07-2009.

6) ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 40 ಎಲ್‌ಸಿಎಲ್ 2010 ದಿನಾಂಕ: 09-07-2010.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 12-01-2010 ಸರ್ಕಾರದ ಆದೇಶದಲ್ಲಿ ಹೊನ್ನಾಳಿ ಕಂದಾಯ ತಾಲ್ಲೂಕಿಗೆ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆ ಸೃಜಿಸಲಾಗಿತ್ತು. ಅದನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 08-02-2010ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 01-06-2010ರ ಪತ್ರದಲ್ಲಿ 8 ಜನರ ಮೆಮೊರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆರವರು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು, 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6)ರಲ್ಲಿ ಓದಲಾದ ದಿನಾಂಕ:09-07-2010ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನ ಮಂಡಳಿಯು ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 40 ಎಲ್‌ಸಿಎಲ್ 2010 ಬೆಂಗಳೂರು ದಿನಾಂಕ: 15-10-2011.**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಕೆ.ಪಿ. ಜಯಪ್ಪ, ವಕೀಲರು, S/o ಪರಮೇಶ್ವರಪ್ಪ ಕೆ.ಎಸ್. ಸಂಗಮೇಶ್ವರ ನಿಲಯ, ಮಾರಿಕೊಪ್ಪ ಮುಖ್ಯರಸ್ತೆ, ಹೊನ್ನಾಳಿ ಅಂಚೆ, ದಾವಣಗೆರೆ ಜಿಲ್ಲೆರವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹೊನ್ನಾಳಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು

ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್.ಶಕುಂತಲ**

ಪಿ.ಆರ್. ನಂ. 2581

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 20/08/11ರ ಪತ್ರ ಸಂಖ್ಯೆ: ಮುಇಂ/ಸನೀ (ಉ)ವ/ಬಿಜೆಪಿ/ ಭೂಸ್ವಾಪ್ರ/2011-12/4405

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾದಿನಾಳ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 28/12/2000
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 07/04/2003

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ಮುದ್ದೇಬಿಹಾಳ ಇಲ್ಲಿ ಎಲ್.ಎ.ಸಿ ಪ್ರಕರಣ ಸಂಖ್ಯೆ: 15/04 ರಿಂದ 21/04ಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 23/04/10ರಂದು ನೀಡಿದ ತೀರ್ಪಿನಲ್ಲಿ ಎಲ್.ಎ.ಸಿ. ಸಂಖ್ಯೆ:20/04ರ ಪ್ರಕರಣದಲ್ಲಿ ಪ್ರತಿ ಎಕರೆಗೆ ರೂ. 1,60,000/- ಗಳನ್ನು ನಿಗದಿಪಡಿಸಿದೆ. ಉಳಿದ ಪ್ರಕರಣಗಳಿಗೆ ಪ್ರತಿ ಎಕರೆಗೆ ರೂ. 1,09,800/- ಗಳನ್ನು ನಿಗದಿಪಡಿಸಿ ತೀರ್ಪು ನೀಡಿದೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 1115 ಎಲ್‌ಸಿಬಿ 2010, ದಿನಾಂಕ 27/12/2010ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ;

| ಕ್ರ. ಸಂ | ಎಲ್.ಎ.ಸಿ ಸಂಖ್ಯೆ | ಮಾದಿನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ) |
|---|---|---|---|---|
| 1 | 15/04 | 93 | 2-01 | 570825 |
| 2 | 16/04 | 95/1 | 0-07 | 49787 |
| 3 | 17/04 | 95/2 | 0-22 | 155403 |
| 4 | 18/04 | 99/3 | 0-24 | 169485 |
| 5 | 19/04 | 102/2 | 0-05 | 35705 |
| 6 | 20/04 | 102/1 | 0-38 | 371591 |
| 7 | 21/04 | 100/1 | 0-28 | 197649 |
| | **ಒಟ್ಟು** | | | **1352797** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 120 ಭೂಸ್ವಾಪ್ರ 2011, ಬೆಂಗಳೂರು ದಿನಾಂಕ: 28ನೇ ಅಕ್ಟೋಬರ್ 2011.**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾದಿನಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ. 13,52,797-00ಗಳನ್ನು (ಹದಿಮೂರು ಲಕ್ಷದ ಐವತ್ತೆರಡು ಸಾವಿರದ ಏಳೂನೂರ ತೊಂಭತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂ ಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂ ಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 13,52,797–00 ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. ನಂ. 2582

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ: 30–09–2011ರೊಳಗೆ ನಡೆಸಬೇಕಾಗಿರುವ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಒ 28 ಸಿಎಲ್‌ಎಂ 2011, ದಿನಾಂಕ: 22–02–2011.
2. ಅಧ್ಯಕ್ಷರು ದಿ. ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರದ ದಿನಾಂಕ: 21–07–2011.

**ಪ್ರಸ್ತಾವನೆ:**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2)ರಡಿ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ: 30–09–2011 ರಂದು ಮುಂದೂಡಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ (2)ರ ಮನವಿಯಲ್ಲಿ ಮೇಲ್ಕಂಡ ಸಂಘದ ವಿವಿಧ ಯೋಜನೆಗಳು ಪ್ರಗತಿಯಲ್ಲಿ ಇರುವ ಕಾರಣ ದಿನಾಂಕ: 31–03–2012ರ ಒಳಗಾಗಿ ಚುನಾವಣೆ ನಡೆಸಲು ಅನುಮತಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 28 ಸಿಎಲ್‌ಎಂ 2011, ಬೆಂಗಳೂರು, ದಿನಾಂಕ: 30–07–2011**

ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಅನ್ನು ಮಾರ್ಪಾಟು ಮಾಡಿ ಸದರಿ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ: 31–03–2012ರೊಳಗೆ ನಡೆಸುವಂತೆ ಆದೇಶಿಸುತ್ತದೆ.

ಸೂಚನೆ: ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31–03–2012ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶ ಮೂಲಕ ಮಾರ್ಪಾಡು ಮಾಡುವಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. ನಂ. 2655

## FOOD, CIVIL SUPPLIES AND CONSUMER AFFAIRS SECRETARIAT

**Subject:** End to end computerization of Public Distribution System (PDS) in the State-constitution of State Apex Committee and State Project e-Governance Mission Team (SPeMT) - reg.

Read:

1) D.O. Letter No. 21-2/2011-PD-II dated 20-09-2011 from the Secretary, Government of India, Ministry of Consumer Affairs, Food and Public Distribution, Department of Food and Public Distribution, New Delhi.

2) D.O. Letter No. 23(7)/2011-PD-II dated 11-10-2011 from the Secretary, Government of India, Ministry of Consumer Affairs Food and Public Distribution, Department of Food and Public Distribution, New Delhi.

**Preamble:**

The Government of India in its letters read at (1) and (2) above, has emphasized the urgent need for an end to end computerization of the Public Distribution System in the State in accordance with Hon'ble Supreme Court's order dated 14-09-2011 in Writ Petition (Civil) No. 196/2001 P.U.C.L Vs. Union of India & others. Further, in accordance with the decision taken in the

meeting of Apex Committee held on 29-07-2011 chaired by Cabinet Secretary, four new Mission Mode Projects (MMPs) were included under National e-Governance Plan (NeGP) including computerization of Public Distribution System.

For computerization of Public Distribution System under the operational guidelines on NeGP, State Government is required to establish a two-tier structure as mentioned below:-

(a) State Apex Committee with Chief Secretary as Chiarman and Secretary (In-charge of the Deptt.), representative of Finance Department, HODs of concerned Deptt., State IT Secretary, NIC Representative, etc.

(b) State Project e-Mission Team (SPeMT) with Secretary In-charge of the Deptt. as Mission Leader, the SPeMT shall comprise of other members as dedicated full-time HOD/Director/Special Secretary, internal domain specialist (full-time), internal technical fulltime representatives, and representative from SeMT/State IT Deptt. (Full-time), full-time NIC Representative(s), etc.

Hence, the following order.

**Government Order No. FCS 219 DRA 2008, Bangalore Dated: 21st October 2011**

Government are pleased to constitute State Apex Committee and State Project e-Mission Team (SPeMT) as follows:

**1) State Apex Committee:**

| | | | |
|---|---|---|---|
| i. | Chief Secretary to Government of Karnataka | : | Chairman |
| ii. | Secretary to Government<br>Food, Civil Supplies & Consumer Affairs Department | : | Member Secretary |
| iii. | Principal Secretary to Government<br>D.P.A.R. (e-Governance) | : | Member |
| iv. | Secretary to Government<br>Finance Department (Expenditure) | : | Member |
| v. | Commissioner,<br>Food, Civil Supplies & Consumer Affairs Department | : | Member |
| vi. | Managing Director<br>Karnataka Food & Civil Supplies Corporation Limited | : | Member |
| vii. | Deputy Director General and State Informatics Officer<br>NIC, Bangalore | : | Member |

**II. State Project e-Govenance Mission Team:**

| | | | |
|---|---|---|---|
| i. | Secretary to Government<br>Food, Civil Supplies & Consumer Affairs Department | : | Chairman |
| ii. | Additional Secretary to Government<br>Food, Civil Supplies & Consumer Affairs Department | : | Member Secretary |
| iii. | Commissioner<br>Food, Civil Supplies & Consumer Affairs Department | : | Member |
| iv. | Technical Director<br>NIC, Bangalore | : | Member |
| v. | General Manager<br>Karnataka Food & Civil Supplies Corporation Limtied | : | Member |

By Order and in the name of the Governor of Karnataka

**Vadagave Basavaraj**

Under Secretary to Government

Food, Civil Supplies and

Consumer Affairs Department.

PR No. 2584

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 28–08–2011ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಭೂಸ್ವಾಪ್ರ/2011–12/4406.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾದಿನಾಳ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 28–12–2000

– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 07–04–2003.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ಮುದ್ದೇಬಿಹಾಳ ಇಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ: 8/04 ರಿಂದ 13/04ಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ: 23–04–2010 ರಂದು ನೀಡಿದ ಸಾಮಾನ್ಯ ಆದೇಶದಲ್ಲಿ ಪ್ರತಿ ಎಕರೆಗೆ ರೂ. 1,09,800/– ಗಳನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 1115 ಎಲ್‌ಸಿಬಿ 2010, ದಿನಾಂಕ: 27–12–2010ರಂದು ಅಭಿಪ್ರಾಯ ನೀಡಿದೆ ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಎಲ್.ಎ.ಸಿ. ಸಂಖ್ಯೆ | ಮಾದಿನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 8/04 | 69 | 0–09 | 63869 |
| 2 | 9/04 | 88/1, 88/2 | 0–20 | 142108 |
| 3 | 10/04 | 92 | 1–17 | 404080 |
| 4 | 11/04 | 93 | 2–00 | 566928 |
| 5 | 12/04 | 93 | 2–01 | 574009 |
| 6 | 13/04 | 93 | 2–01 | 574009 |
| **ಒಟ್ಟು** | | | | **2325003** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 121 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2011**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾದಿನಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ. 23,25,003–00ಗಳನ್ನು (ಇಪ್ಪತ್ಮೂರು ಲಕ್ಷದ ಇಪ್ಪತ್ತೈದು ಸಾವಿರದ ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 23,25,003–00ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ

(ಸಣ್ಣ ನೀರಾವರಿ)

ಪಿ.ಆರ್. ನಂ. 2585

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ/2010–11/5127, ದಿನಾಂಕ: 03–10–2011.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗೊಡಚಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಕೋರಿ ಮೇಲೆ ಓದಲಾದ ದಿನಾಂಕ: 03–10–2011ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ಹೊರಡಿಸಿದ ದಿನಾಂಕ: 11–05–2006

– ಭೂಸ್ವಾಧೀನಾಧಿಕಾರಿಗಳು ಐತೀರ್ಪು ಘೋಷಿಸಿದ ದಿನಾಂಕ: 17–12–2007.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ರಾಮದುರ್ಗ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ: 107/08 ಮತ್ತು 135/08ಗಳನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆಗೆ ರೂ. 2,25,000-00ಗಳನ್ನು ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಎಲ್.ಎ.ಸಿ. ಸಂಖ್ಯೆ | ಗೊಡಚಿ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 107/08 | 47/1 | 2-09 | 1156604 |
| 2 | 135/08 | 47/2 | 0-09 | 117409 |
| **ಒಟ್ಟು** | | | | **1274013** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 144 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2011**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡ ಗೊಡಚಿ ಗ್ರಾಮಕ್ಕೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ, **ಉಪ ವಿಭಾಗಾಧಿಕಾರಿಗಳು, ಬೈಲಹೊಂಗಲ ಇವರು ಈ ಪ್ರಕರಣಗಳಲ್ಲಿ ಮೇಲ್ಮನವಿ ಸಲ್ಲಿಸುವ ಸಂಬಂಧ ಕಂದಾಯ ಇಲಾಖೆಯಿಂದ ಸೂಕ್ತ ಅಭಿಪ್ರಾಯವನ್ನು ಪಡೆದುಕೊಳ್ಳುವ ಷರತ್ತಿಗೊಳಪಟ್ಟು** ರೂ. 12,74,013-00ಗಳನ್ನು (ಹನ್ನೆರಡು ಲಕ್ಷದ ಎಪ್ಪತ್ತಾಲ್ಕು ಸಾವಿರದ ಹದಿಮೂರು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 12,74,013ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. ನಂ. 2586

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011-12/4403, ದಿನಾಂಕ: 20-08-2011.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕುಷ್ಟಗಿ ಹಾಗೂ ಗಂಗಾವತಿ ತಾಲ್ಲೂಕಿನ ಪುರ ಮತ್ತು ಯತ್ನಟ್ಟಿ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಕೊಪ್ಪಳದ ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಹೊರಡಿಸಿರುವ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್‌ರವರು ಕೋರಿದ್ದಾರೆ.

ಪುರ ಕೆರೆಯ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿವೆ:

- ಪುರ ಸ.ನೀ. ಕೆರೆಗಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ದಿನಾಂಕ: 14/02/02 ರಂದು ಹೊರಡಿಸಲಾಗಿದೆ.
- ಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಪರಿಹಾರ ಧನದ ಐತೀರ್ಪನ್ನು ಭೂಸ್ವಾಧೀನಾಧಿಕಾರಿಗಳು ದಿನಾಂಕ: 29-09-2005 ರಂದು ರಚಿಸಿದ್ದು ಜಿಲ್ಲಾಧಿಕಾರಿಗಳು ದಿನಾಂಕ: 09-11-2005 ರಂದು ಅನುಮೋದನೆ ನೀಡಿದ್ದಾರೆ.

ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಕೆಲವೊಂದು ಸ.ನಂ.ಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರ ಧನಕ್ಕಾಗಿ ಗಂಗಾವತಿ ಹಿರಿಯ ಶ್ರೇಣಿ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ: 35/08 ಮತ್ತು 24/07ರಲ್ಲಿ ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ಪಡೆದುಕೊಂಡಿದ್ದಾರೆ. ಈ ತೀರ್ಪಿನಲ್ಲಿ ಭೂಸ್ವಾಧೀನಾಧಿಕಾರಿಗಳು ನಿಗದಿಪಡಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ: 35/08ರಲ್ಲಿ ಪ್ರತಿ ಎಕರೆ ಭೂಮಿಯ

ಮಾರುಕಟ್ಟೆ ದರ ರೂ. 11,500/– ಗಳಿಂದ ರೂ. 1,09,167/–ಗಳಿಗೆ ಹಾಗೂ 24/07ರಲ್ಲಿ ಪ್ರತಿ ಎಕರೆಗೆ ರೂ. 1,05,500/–ಗಳಿಗೆ ಹೆಚ್ಚಿಸಿ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ನೀಡಲು ಆದೇಶಿಸಿದೆ. ಈ ಆದೇಶಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 316 ಎಲ್‌ಸಿಜಿ 08, ದಿನಾಂಕ: 16–02–2009ರಲ್ಲಿ ಹಾಗೂ ಆರ್‌ಡಿ 999 ಎಲ್‌ಸಿಜಿ 2008, ದಿನಾಂಕ: 05–02–2009ರಲ್ಲಿ ಅಭಿಪ್ರಾಯ ನೀಡಿದೆ.

ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಕೊಪ್ಪಳದ ಉಪ ವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಈ ಕಾಯ್ದೆಯಡಿ ಸದರಿ ಸ.ನಂ.ಗಳ ಜಮೀನುಗಳಿಗೆ ರೂ. 5,46,916/–ಗಳ ಐತೀರ್ಪನ್ನು ದಿನಾಂಕ: 20–07–2010ರಂದು ಹೊರಡಿಸಿದ್ದಾರೆ. ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ:

| ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ<br>ಕಂ/ಭೂಸ್ವಾ/ಸಾ/6/01–02/28(ಎ)ಅಪೀಲು/ದಿನಾಂಕ: 20–07–2010 | | | | |
|---|---|---|---|---|
| ಕ್ರಮ ಸಂಖ್ಯೆ | ಸ.ನಂ. | ಗ್ರಾಮ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
| 1 | 83/2 | ಪುರ | 0–21 | 184493 |
| 2 | 54/ಅ | ಯತ್ನಟ್ಟಿ | 0–20 | 181213 |
| 3 | 54/2ಸಿ | ಯತ್ನಟ್ಟಿ | 0–10 | 90605 |
| 4 | 61/ಎ | ಯತ್ನಟ್ಟಿ | 0–10 | 90605 |
| | | **ಒಟ್ಟು** | | **546916** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು, ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 123 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2011**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಮತ್ತು ಯತ್ನಟ್ಟಿ ಗ್ರಾಮಗಳ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳದ ಉಪವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿರುವ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ. 5,46,916–00 ಗಳನ್ನು (ಐದು ಲಕ್ಷದ ನಲವತ್ತಾರು ಸಾವಿರದ ಒಂಭೈನೂರ ಹದಿನಾರು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪಾವತಿಸಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತಃಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 5,46,916/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. ನಂ. 2587

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಸಚಿವಾಲಯ

**ವಿಷಯ :** ಮಲೆ ಮಹದೇಶ್ವರ ಬೆಟ್ಟದಲ್ಲಿ ಜಾನಪದ ಅಧ್ಯಯನ ಕೇಂದ್ರ ಸ್ಥಾಪನೆ ತಜ್ಞರ ಸಮಿತಿ ರಚಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 271 ಕಸಧ 2007 ದಿ: 7.08.2007

**2.** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಸನಿ: 24ಹೊಯೋ: 2007–08 (ಭಾಗ–1) ದಿನಾಂಕ: 28–06–2010.

**ಪ್ರಸ್ತಾವನೆ :**

ಮಲೆ ಮಹದೇಶ್ವರ ಬೆಟ್ಟದಲ್ಲಿ ಜಾನಪದ ಅಧ್ಯಯನ ಕೇಂದ್ರ ಸ್ಥಾಪಿಸಲು ಶ್ರೀ ಕೆರೆಮನೆ ಶಂಭುಹೆಗಡೆ ರವರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯನ್ನು ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಚಿಸಲಾಗಿದೆ. ಶ್ರೀ ಕೆರೆಮನೆ ಶಂಭುಹೆಗಡೆಯವರು ನಿಧನರಾಗಿರುವುದರಿಂದ ಅವರ ಬದಲಿಗೆ ಹಿರಿಯ ವಿದ್ವಾಂಸರಾದ ಡಾ. ಹೆಚ್.ಜೆ. ಲಕ್ಕಪ್ಪಗೌಡ ರವರನ್ನು ಹೊಸ ಅಧ್ಯಕ್ಷರನ್ನಾಗಿ ನೇಮಿಸಿ ಆದೇಶ ಹೊರಡಿಸುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರು ಓದಲಾದ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಇದನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 720 ಕಸಧ 2010, ಬೆಂಗಳೂರು, ದಿನಾಂಕ : 22–10–2011**

ಪ್ರಸ್ತಾವನೆಯಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ. ಹೆಚ್.ಜೆ. ಲಕ್ಕಪ್ಪಗೌಡ ಹಿರಿಯ ವಿದ್ವಾಂಸರು ಇವರನ್ನು ಮಲೆ ಮಹದೇಶ್ವರ ಬೆಟ್ಟದಲ್ಲಿ ಜಾನಪದ ಅಧ್ಯಯನ ಕೇಂದ್ರ ಸ್ಥಾಪಿಸಲು ರಚಿಸಿರುವ ತಜ್ಞರ ಸಲಹಾ ಸಮಿತಿಯ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ. ಈ ತಜ್ಞರ ಸಮಿತಿಯು ಸಮಗ್ರ ವರದಿಯನ್ನು ಸರ್ಕಾರಕ್ಕೆ ಎರಡು ತಿಂಗಳ ಕಾಲಾವಧಿಯಲ್ಲಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ

(ಸಂಸ್ಕೃತಿ)

ಪಿ.ಆರ್. 2588

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಗುರುಸಿದ್ದೇಶ್ವರ ವಿದ್ಯಾವರ್ಧಕ ಸಂಘ, ಹಾವೇರಿ ಇದಕ್ಕೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಇ 123 ಸಸಂನೋ 2008, ದಿನಾಂಕ: 21–02–2011.
2. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/164/ಎಸ್‌ಓಆರ್/–2008–2009, ದಿನಾಂಕ: 07–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಗುರುಸಿದ್ದೇಶ್ವರ ವಿದ್ಯಾವರ್ಧಕ ಸಂಘ, ಹಾವೇರಿ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಕಲಂ 27–ಎ (1)ಸಿ ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾವೇರಿ ಉಪ ವಿಭಾಗ, ಹಾವೇರಿ ಇವರನ್ನು ಆಡಳಿತಗಾರರಾಗಿ 06 ತಿಂಗಳ ಅವಧಿಗೆ ಅಥವಾ ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನೇಮಿಸಿ, ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಶ್ರೀ ಗುರುಸಿದ್ದೇಶ್ವರ ವಿದ್ಯಾವರ್ಧಕ ಸಂಘ, ಹಾವೇರಿ ಈ ಸಂಘಕ್ಕೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾವೇರಿ ಉಪ ವಿಭಾಗ, ಹಾವೇರಿ ರವರನ್ನು ಆಡಳಿತಗಾರರನ್ನಾಗಿ ನೇಮಿಸಿದ್ದು, ಸದರಿಯವರನ್ನು ದಿನಾಂಕ: 17/05/2011 ರ ಪತ್ರದಲ್ಲಿ ಕೋರಿರುವಂತೆ ಸಂಸ್ಥೆಯಲ್ಲಿ ಎರಡು ಸಮಾನಾಂತರ ಆಡಳಿತ ಮಂಡಳಿಗಳಿದ್ದು, ತಮ್ಮ ತಮ್ಮಲ್ಲಿಯ ಸದಸ್ಯರ ಬೇರೆ ಬೇರೆ ಯಾದಿಯನ್ನು ಸಲ್ಲಿಸಿರುತ್ತಾರೆ. ಎರಡೂ ಬಣದ ಸದಸ್ಯರ ಪಟ್ಟಿಯನ್ನು ಪರಿಶೀಲಿಸಿ, ಆಡಳಿತ ಮಂಡಳಿ ಚುನಾವಣೆ ಜರುಗಿಸುವುದು ಕಷ್ಟ ಸಾಧ್ಯವಾಗಿರುತ್ತದೆ. ಆದ್ದರಿಂದ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ (1)ಸಿ ರಡಿಯಲ್ಲಿ ಮುಂದಿನ ಆರು ತಿಂಗಳ ಅವಧಿಗೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸುವಂತೆ ಕೋರಿರುವುದರಿಂದ ಆಡಳಿತಾಧಿಕಾರಿಯ ಅವಧಿಯನ್ನು ಆರು ತಿಂಗಳ ಅವಧಿಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 123 ಸಸಂನೋ 2008, ಬೆಂಗಳೂರು, ದಿನಾಂಕ : 20ನೇ ಅಕ್ಟೋಬರ್, 2011**

ಶ್ರೀ ಗುರುಸಿದ್ದೇಶ್ವರ ವಿದ್ಯಾವರ್ಧಕ ಸಂಘ ಹಾವೇರಿ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ (1)ಸಿ ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ : 20–08–2011 ರಿಂದ ಮತ್ತೆ ಆರು ತಿಂಗಳ ವರೆಗೆ ವಿಸ್ತರಿಸಿ ಆದೇಶಿಸಿದೆ. ಸದರಿ ಅವಧಿಯಲ್ಲಿ ಆಡಳಿತಾಧಿಕಾರಿಗಳು ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಸಹಕಾರ ಇಲಾಖೆ

ಪಿ.ಆರ್. 2589

## FINANCE SECRETARIAT

**Sub :** Implementation of HRMS System-Revision of procedure for Drawal of arrears of Salary of Govt. Employees in case of transfers from State Sector to District Sector and vice-versa-regarding.

**Read :** Govt. letter No. DPAR 25 EGV 2006 dated: 2-08-2007.

**Preamble:**

1. The Human Resource Management System (HRMS) has been introduced for generating salary. Bills of Govt. Employees in the State in March-2005 and is being implemented since then I full from March-2008. The HRMS takes care of the two main functions viz., Service Records Maintenance and Pay roll generation of employees. The pay roll module automates the pay process by consolidating data on employee's attendance, calculating various deductions, taxes etc. and generates periodic pay cheques and Employee Tax Reports. The pay bill is then submitted to the Treasury for payment. The Service Record Maintenance Module is a component covering all other HR aspects and records the details of employees from the date of his/her joining service until his

retirement. The system records basic demographic data like address, data of joining, training & development capacities and skills management records and other related activities of employees.

2. At present whenever officers/staff working in State of District Sector are transferred, the following procedure is followed for drawal of their arrears of salary.

(i) In case of transfer of officers/staff within a State Sector or from one District Sector to another District Sector the arrears of alary will be drawn by the Department where the official is presently working.

(ii) In case of transfer of officers/staff from State Sector to District Sector or vice-versa, the arrears of salary will be drawn by the Department where the official was previously working.

3. Since all pay and service details in the State are generated only through HRMS, it is possible for the State Govt. Employees to receive their salary from one Drawing & Disbursing Officer (DDO) only. In view of this as per the procedure explained in para 2 (ii) above, for drawal of arrears of pay of officials transferred from State Sector to District Sector and Vice-versa, bills are not prepared through HRMS but are prepared manually in the previous office where the officer where the officer/staff was working. This is because in the HRMS the concerned officer/staff is linked to the DDO of the office where he/she is currenty working. Therefore important data such as details of deductions including Income Tax will not be recorded in HRMS, leading to short/excess deduction of Income Tax and incorrect Form 16 being generated. Also any deduction under New Pension System (NPS) would also not be reflected in HRMS.

4. In view of the facts indicated above, e-Governance Department had proposed that whenever officials are transferred from State Sector to District Sector and vice-versa, their arrears of salary may be paid by the Drawing & Disbursing Officer of the office to which the Government servant is transferred.

5. The proposal has been examined and hence this order.

**Govt. Order No. FD 49 TAR 2011, Bangalore, dated : 10-10-2011.**

Whenever officer/staff working in a Government Department are transferred from State Sector to District Sector (Zilla Panchayat, Taluk Panchayat Gram Panchyat) and vice-versa, their salary arrears and salary due for part of a month may drawn on the bill of the establishment to which the Government servant is transferred.

2. The expenditure in this behalf may be debited to the budget provision of the office to which the Government Servant is transferred. No. inter-Departmental adjustment would be necessary in such cases.

3. Necessary amendments to article 80(c) and 129 of KFC will be made in due course.

By Order and in the name of the Governor of Karnataka

**C. Shama Rao**

Deputy Secretary to Government

Finance Department

P.R. 2590 (FR & BCC)

## FINANCE SECRETARIAT

**Sub :** Cases in which assent of Finance Department may be presumed to have been given.

**Read :** 1. Govt. Order No. FD 1 TFP 96 Bangalore dated 10-07-1996.

**2.** Govt. Order No. FD 1 TFP 2002 Banglore dated : 20-01-2003.

**3.** Govt. Order No. FD 1 TFP 2008 Bangalore dated: 16-05-208.

**Preamble:**

In the Government order read at (1) above, certain powers have been delegated to the Secretaries of the Administrative Departments of Government. In the Government Order read at (2) above among other modifications to certain items of Government Order No. FD 1 TFP 96 dated: 10-07-1996, Item No. 49 has been modified as follows:

"Excess over original estimate or revised estimate upto 25% over original estimate or Rs. 50.00 lakhs whichever is lower".

In para 13 of the Government Order read at (3) above, the Secretaries to Government of Administrative Departments have been delegated with powers to accord administrative approval for estimates of works and procurement of goods an services upto Rs. 5.00 crores presuming the concurrence of Finance Department. Therefore, it has been considered necessary to revise the power of approving excess over the original estimate or revised estimate under item No. 49 and hence this order.

**Govt. Order No. FD 1 TFP 2011, Bangalore, dated : 28-09-2011.**

The Government is pleased to substitute the item No. 49 indicated in the Government Order No. FD 1 TFP 2002 dated : 20-01-2003 as detailed below to enable the Secretaries to Government to exercise enhanced powers.

Item No. 49 " Excess over original estimate or revised estimate upto 25% over original estimate or Rs. 250.00 lakhs whichever is lower".

By Order and in the name of the Governor of Karnataka

**C. Shama Rao**

Deputy Secretary to Government

(FR & BCC)

P.R. 2591 Finance Department

## FINANCE SECRETARIAT

**Sub :** Dearness Allowance – Revision of rates.

**Read :**
1. Govt. Order No. FD 17 SRP 2007, dated: 16-5-2007
2. Govt. Order No. FD 19 SRP 2007, dated: 16-5-2007
3. Govt. Order No. FD 21 SRP 2007, dated: 28-05-2007
4. Govt. Order No. FD 42 SRP 2007, dated: 27-09-2007
5. Govt. Order No. FD 03 SRP 2008, dated: 02-04-2008
6. Govt. Order No. FD 12 SRP 2008, dated: 12-11-2008
7. Govt. Order No. FD 05 SRP 2009, dated: 19-05-2009
8. Govt. Order No. FD 14 SRP 2009, dated: 24-10-2009
9. Govt. Order No. FD 14 SRP 2010, dated: 12-04-2010
10. Govt. Order No. FD 26 SRP 2010, dated: 29-09-2010
11. Govt. Order No. FD 21 SRP 2011, dated: 07-04-2011
12. Letter No. GEA/1099/2011-12 dated 03-10-2011 received from the President, Karnataka State Government Employees' Association

**Govt. Order No. FD 35 SRP 2011, Bangalore, dated : 15-10-2011**

Government are pleased to sanction increase in the rates of Dearness Allowance payable in the Revised pay scales 2007 from the existing 62.5% to 69.5% of the basic pay to the State Government Employees with effect from 1st July 2011.

2. The increase in Dearness Allowance admissible under this order is payable in cash until further orders.

3. These orders will apply to the full time Government employees, employees of Zilla Panchayats, work charged employees on regular time scales of pay, full time employees of aided educational Institutions and Universities who are on regular time scales of pay.

4. For the purpose of this order, the term 'Basic Pay' means, pay drawn by a Government Employee in the scale of pay applicable to the post held by him and includes:

a. Stagnation increment, if any, granted to him above the maximum of the scale of pay.

b. Personal Pay, if any, granted to him under sub-rule (3) of Rule 7 of the Karnataka Civil Services (Revised Pay) Rules, 2007.

5. Basic Pay shall include any emoluments other than those specified above.

6. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

7. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka

**Sundara Raja Guptha**

Deputy Secretary to Government

Finance Department (Services -2)

P.R. 2592

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ. ಎನ್.ಸಿ.ಭವ್ಯ ವೈದ್ಯಾಧಿಕಾರಿ, ಹಿರೇಗೊಂಟಾನೂರು, ಚಿತ್ರದುರ್ಗ ತಾಲ್ಲೂಕು ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ(ಎಂ)/50/2010–11 ದಿನಾಂಕ: 29/07/2011

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ. ಎನ್.ಸಿ.ಭವ್ಯ ವೈದ್ಯಾಧಿಕಾರಿ, ಹಿರೇಗೊಂಟಾನೂರು, ಚಿತ್ರದುರ್ಗ ತಾಲ್ಲೂಕು/ಜಿಲ್ಲೆ ಇವರು ದಿನಾಂಕ 10–02–2009 ರಂದು ವೈದ್ಯಾಧಿಕಾರಿ ಹುದ್ದೆಗೆ ಹಾಜರಾಗಿರುತ್ತಾರೆ. ತದನಂತರ ಇಲಾಖೆಯ ಅನುಮತಿ ಪಡೆಯದೆ ದಿನಾಂಕ: 15–07–2010 ರಿಂದ ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಿದ್ದು, ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ನೇಮಕಾತಿ ಷರತ್ತಿನನ್ವಯ ಖಾಯಂಪೂರ್ವ ಸೇವಾವಧಿಯಲ್ಲಿ ಸ್ನಾತಕೋತ್ತರ ವ್ಯಾಸಂಗ ನಡೆಸಲು ಅಥವಾ ಮುಂದುವರಿಸಲು ಅವಕಾಶವಿಲ್ಲದಿರುವುದರಿಂದ ಪ್ರೊಬೆಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 342 ಹೆಚ್‌ಎಸ್‌ಹೆಚ್ 2011 , ಬೆಂಗಳೂರು, ದಿನಾಂಕ : 19-09-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ. ಎನ್.ಸಿ.ಭವ್ಯ ವೈದ್ಯಾಧಿಕಾರಿ, ಹಿರೇಗೊಂಟನೂರು, ಚಿತ್ರದುರ್ಗ ತಾಲ್ಲೂಕು/ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ 15/07/2010 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರು ಇಲಾಖೆಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ಸದರಿಯವರನ್ನು ದಿನಾಂಕ: 15-07-2010 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಪಿ.ಆರ್. 2593

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್. ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣೆ- ಅಂತಿಮ ಆದೇಶ.

**ಓದಲಾಗಿದೆ :**
1. ನೋಟೀಸು ಸಂಖ್ಯೆ: ಸಿಆಸುಇ 206, ಎಸ್‌ಇಎನ್ 2007, ದಿನಾಂಕ 20-9-2010
2. ಶ್ರೀ ಎಸ್. ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 5-10-2010.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 206 ಸೇಇವಿ 2007, ದಿನಾಂಕ: 19-11-2010
4. ಶ್ರೀ ಎಂ.ಉಮೇಶ್. ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ ಹಾಗೂ ವಿಚಾರಣಾಧಿಕಾರಿಗಳು, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ 23-6-2011.

**ಪ್ರಸ್ತಾವನೆ :**

ಶ್ರೀ ಎಸ್. ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಆರೋಗ್ಯ) ಇಲ್ಲಿ ದಿನಾಂಕ 6-1-2005 ರಿಂದ 17-12-2007 ರವರೆಗೆ ಕಾರ್ಯ ನಿರ್ವಹಿಸುತ್ತಿದ್ದಾಗ, 22 ಜನ ವೈದ್ಯಾಧಿಕಾರಿಗಳು, 48 ಗ್ರೂಪ್-ಸಿ ಮತ್ತು 42 ಗ್ರೂಪ್-ಡಿ ಹುದ್ದೆಗಳ ವರ್ಗಾವಣೆ ಆದೇಶ ಮತ್ತು ತಿದ್ದುಪಡಿ ಆದೇಶಗಳನ್ನು ಹೊರಡಿಸುವಾಗ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ತಮ್ಮ ಅಧಿಕಾರದ ವ್ಯಾಪ್ತಿ ಮೀರಿ ಆದೇಶಗಳನ್ನು ಹೊರಡಿಸುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳನ್ನು ಹಾಗೂ ಸಚಿವಾಲಯದ ಕೈಪಿಡಿಯ ಕಂಡಿಕೆ-77ನ್ನು ಉಲ್ಲಂಘಿಸಿರುತ್ತಾರೆ. ಅದೇ ರೀತಿ ಸದರಿ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ನಿಯಮಗಳನ್ನು ಪರಿಶೀಲಿಸದೆ ಬೀದರ್‌ನ ಗುರುನಾನಕ್ ಆಸ್ಪತ್ರೆ ಸ್ವಯಂ ಸೇವಾ ಸಂಸ್ಥೆಗೆ 2004-05ನೇ ಸಾಲಿನ ಅವಧಿಗೆ ಸಂಬಂಧಿಸಿದಂತೆ ರೂ. 5.41 ಲಕ್ಷಗಳ ಅನುದಾನ ಬಿಡುಗಡೆ ಮಾಡಿರುವ ಆರೋಪಗಳಿಗೆ ಒಳಗಾಗಿರುತ್ತಾರೆ. ಈ ಆರೋಪಗಳಿಗೆ ಸಂಬಂಧಿಸಿದಂತೆ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತು ಪ್ರಸ್ತಾವನೆ ಪರಿಶೀಲನೆಯಲ್ಲಿದ್ದಾಗ, ಸಚಿವರುಗಳಿಂದ ಬಾಹ್ಯ ಪ್ರಭಾವ ಬೀರಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳನ್ನು ಉಲ್ಲಂಘಿಸಿರುವ ಆರೋಪಗಳು ಸೇರಿದಂತೆ ಒಟ್ಟು 8 ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ (1)ರ ನೋಟೀಸ್‌ನಲ್ಲಿ ಆರೋಪಿತ ಅಧಿಕಾರಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ (2)ರ ಪ್ರತಿರಕ್ಷಣಾ ಹೇಳಿಕೆಯಲ್ಲಿ ಆರೋಪಿತ ಅಧಿಕಾರಿಯು ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿದ್ದು ಅದಕ್ಕೆ ಯಾವುದೇ ದಾಖಲಾತಿಗಳನ್ನು ನೀಡಿರುವುದಿಲ್ಲ. ಹೀಗಾಗಿ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ಉಮೇಶ್, ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ನಿಯಮಾನುಸಾರ ವಿಚಾರಣೆಯನ್ನು ಕೈಗೊಂಡು ವಿಚಾರಣಾಧಿಕಾರಿಗಳು ಮೇಲೆ ಓದಲಾದ (4)ರಲ್ಲಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯ ಒಟ್ಟಾರೆ ಸಾರಾಂಶವೇನೆಂದರೆ ಆರೋಪಿತ ಅಧಿಕಾರಿಯ ವಿರುದ್ಧ ಮಾಡಲಾಗಿರುವ ಎಲ್ಲಾ 8 ಆರೋಪಗಳು ಸಾಬೀತಾಗಿಲ್ಲವೆಂದು ತಿಳಿಸಿರುತ್ತಾರೆ. ಈ ವಿಚಾರಣಾ ವರದಿಯನ್ನು ಸರ್ಕಾರವು ಅಂಗೀಕರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 206 ಸೇಇವಿ 2007, ಬೆಂಗಳೂರು, ದಿನಾಂಕ : 26-10-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಎಸ್. ಆರ್. ಶಂಕರ್, ನಿವೃತ್ತ ಅಧೀನ ಕಾರ್ಯದರ್ಶಿ ಹಿಂದಿನ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಆರೋಗ್ಯ) ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧದ 8 ಆರೋಪಗಳಿಗೆ ಸಂಬಂಧಿಸಿದಂತೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗದೆ ಇರುವುದರಿಂದ ಶ್ರೀ ಎಸ್. ಆರ್. ಶಂಕರ್, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಸದರಿ ಆರೋಪಗಳಿಂದ ಆರೋಪಮುಕ್ತರನ್ನಾಗಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-3)

ಪಿ.ಆರ್. 2594

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಗೃಹ ಪರಿಚಾರಕ ಭತ್ಯಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 17 ಎಸ್‌ಆರ್‌ಪಿ (1) 61, ದಿನಾಂಕ: 27-02-1961
2. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 73 ಸಿಡಿಎ 78, ದಿನಾಂಕ: 15-05-1980
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 40 ಸಿಡಿಎ 85 (ಪಿ) ದಿನಾಂಕ: 02-05-1987
4. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಸಿಸೇನಿ 96, ದಿನಾಂಕ: 24-04-1997
5. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಸಿಸೇನಿ 96, ದಿನಾಂಕ: 16-09-1997
6. ತಿದ್ದುಪಡಿ ಆದೇಶ ಸಂಖ್ಯೆ: ಸಿಆಸುಇ 34 ಸಿಸೇನಿ 96, ದಿನಾಂಕ: 01-06-1998
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 196 ಸಿಸೇನಿ 2001, ದಿನಾಂಕ: 06-05-2006

**ಪ್ರಸ್ತಾವನೆ :**

ಮೇಲೆ (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ವಿವಿಧ ವರ್ಗದ ಅಧಿಕಾರಿಗಳಿಗೆ ಮಾಸಿಕ ರೂ. 1500/-ಗಳ ಗೃಹ ಪರಿಚಾರಕೆ ಭತ್ಯಯನ್ನು ನಿಗದಿಗೊಳಿಸಲಾಗಿದೆ. ಗೃಹ ಪರಿಚಾರಿಕೆ ಭತ್ಯೆಯನ್ನು ಪರಿಷ್ಕರಿಸಲು ಮನವಿಗಳು ಸ್ವೀಕೃತವಾಗಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಭತ್ಯೆಯನ್ನು ವಿವಿಧ ವರ್ಗದ ಅಧಿಕಾರಿಗಳಿಗೆ ಪರಿಷ್ಕರಿಸಿ ಹೆಚ್ಚಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 232 ಸಿಸೇನಿ 2011, ಬೆಂಗಳೂರು, ದಿನಾಂಕ: 22-10-2011.**

ಸರ್ಕಾರದ ವಿವಿಧ ವರ್ಗದ ಅಧಿಕಾರಿಗಳಿಗೆ ನೀಡುತ್ತಿರುವ ಗೃಹ ಪರಿಚಾರಕ ಭತ್ಯೆಯ ದರಗಳನ್ನು ಈ ಕೆಳಗಿನಂತೆ ಹೆಚ್ಚಿಸಲು ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರ. ಸಂ. | ಅಧಿಕಾರಿ ವರ್ಗ | ಗೃಹ ಪರಿಚಾರಕ ಭತ್ಯೆ ಮಾಸಿಕ ರೂ.ಗಳು |
|---|---|---|
| 1 | ಮುಖ್ಯ ಕಾರ್ಯದರ್ಶಿಗಳು/ಅಪರ ಮುಖ್ಯ ಕಾರ್ಯದರ್ಶಿಗಳು | 8000/- |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು | 6000/- |
| 3 | ಸರ್ಕಾರದ ಕಾರ್ಯದರ್ಶಿಗಳು | 5000/- |
| 4 | ಇಲಾಖಾ ಮುಖ್ಯಸ್ಥರು | 3000/- |

ಈ ಆದೇಶವು ದಿನಾಂಕ 01-10-2011 ರಿಂದ ಜಾರಿಗೆ ಬರುತ್ತದೆ

ಅಧಿಕಾರಿಗಳ ನಿವಾಸಕ್ಕೆ ಕಚೇರಿಯಿಂದ ಗೃಹಚಾರಕನನ್ನು ಒದಗಿಸದಿದ್ದಲ್ಲಿ ಮಾತ್ರ ಈ ಭತ್ಯೆಯನ್ನು ನೀಡಲಾಗುವುದು. ಈ ಭತ್ಯೆಯನ್ನು ಮಂಜೂರು ಮಾಡಲು ಈ ಹಿಂದೆ ವಿಧಿಸಿರುವ ಇತರೆ ನಿರ್ಬಂಧಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಅದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 10 ಎಸ್‌ಆರ್‌ಪಿ 2011, ದಿನಾಂಕ 06-08-2011 ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ. ಆನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ-3)

ಪಿ.ಆರ್. 2595

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಆರ್. ಹೆಚ್. ರಡ್ಡಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರಿಗೆ ತಡವಾಗಿ ಪಾವತಿಸಿದ ಗಳಿಕೆ ರಜೆಗೆ ಬಡ್ಡಿ ನೀಡುವ ಬಗ್ಗೆ.

**ಓದಲಾಗಿದೆ :**
1) ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಜಿಓಬಿ(1) 28/2001, ದಿನಾಂಕ 14-01-2011.
2. ಮಹಾಲೇಖಪಾಲರು (ಎ ಮತ್ತು ಇ) ಕರ್ನಾಟಕ, ಬೆಂಗಳೂರು ರವರ ಪತ್ರ ಸಂಖ್ಯೆ: ಜಿಇ.13/ಜೆ3/ವಿಓಎಲ್.ಆರ್1/2011-12/294, ದಿನಾಂಕ 03-06-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರ ದಿನಾಂಕ 14-01-2011 ರಲ್ಲಿ ಶ್ರೀ ಆರ್. ಹೆಚ್. ರಡ್ಡಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರಿಗೆ ತಡವಾಗಿ ಪಾವತಿಸಿದ 34 ದಿನಗಳ ಗಳಿಕೆ ರಜೆಗೆ ಬಡ್ಡಿ ಮೊತ್ತವನ್ನು ಮಂಜೂರು ಮಾಡುವಂತೆ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ರವರು ಕೋರಿರುತ್ತಾರೆ. ಅದರಂತೆ ಉಲ್ಲಖ (2)ರಲ್ಲಿ ಮಹಾಲೇಖಪಾಲರು (ಎ ಮತ್ತು ಇ) ಕರ್ನಾಟಕ, ಬೆಂಗಳೂರು ರವರು ಪ್ರಾಧಿಕರಣ ಪತ್ರದಲ್ಲಿ ಪಾವತಿಸಿದ 34 ದಿನಗಳ ಗಳಿಕೆ ರಜೆ ನಗದೀಕರಣ ಮೊತ್ತವನ್ನು ಸೂಚಿಸಿರುತ್ತಾರೆ.

ಈ ಬಗ್ಗೆ ಪರಿಶೀಲಿಸಲಾಗಿ ಶ್ರೀ ಆರ್. ಹೆಚ್. ರಡ್ಡಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರಿಗೆ ದಿನಾಂಕ 30-06-2005ಕ್ಕೆ ಅನ್ವಯಿಸುವಂತೆ ಒಟ್ಟು 34 ದಿನಗಳ ಗಳಿಕೆ ರಜೆ ನಗದೀಕರಣ ಮೊತ್ತ ರೂ. 41,669/- ಗಳಾಗಿರುತ್ತವೆ. ದಿನಾಂಕ 01-10-2005 ರಿಂದ 31-01-2011ರ ವರೆಗೆ ಒಟ್ಟು

5 ವರ್ಷ 4 ತಿಂಗಳಿಗೆ ರೂ. 41,669/– ಗಳಿಗೆ ಶೇಕಡ 8 ರಂತೆ ಮೊತ್ತ 17,782– (ಹದಿನೇಳು ಸಾವಿರದ ಏಳುನೂರ ಎಂಭತ್ತೆರಡು ರೂಪಾಯಿಗಳು ಮಾತ್ರ) ಗಳನ್ನು ಬಡ್ಡಿಯಾಗಿ ಪಾವತಿಸಬೇಕಾಗಿರುತ್ತದೆ. ಅದರಂತೆ ಬಡ್ಡಿ ಮೊತ್ತವನ್ನು ಪಾವತಿಸಲು ಈ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಸೇಉನ್ಯಾ 2011, ಬೆಂಗಳೂರು, ದಿನಾಂಕ: 21–10–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ಶ್ರೀ ಆರ್. ಹೆಚ್. ರಡ್ಡಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರಿಗೆ ತಡವಾಗಿ ಪಾವತಿಸಲಾದ 34 ದಿನಗಳ ಗಳಿಕೆ ರಜೆ ನಗದೀಕರಣ ಮೊತ್ತ ರೂ. 41,669/–ಗಳಿಗೆ ಶೇಕಡ 8 ರಂತೆ ಒಟ್ಟು ರೂ. 17,782/– (ಹದಿನೇಳು ಸಾವಿರದ ಏಳುನೂರ ಎಂಭತ್ತೆರಡು ರೂಪಾಯಿಗಳು ಮಾತ್ರ) ಗಳನ್ನು ಬಡ್ಡಿಯಾಗಿ ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2071-01-104-2-06–interest on belated payment of D.C.R.G. ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ(ವಿ) 78 ಪಿಇಎನ್–1/2011, ದಿನಾಂಕ 21–09–2011ರಲ್ಲಿ ನೀಡಿರುವ ಸಹಮತಿಯೊಡನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

ಪಿ.ಆರ್. 2596

## ಕಂದಾಯ ಸಚಿವಾಲಯ

**ವಿಷಯ :** ಹೇಮಾವತಿ ಹಾಗೂ ಯಗಚಿ ಯೋಜನೆಗಳಲ್ಲಿ ಶೀತಪೀಡಿತವೆಂದು ಪರಿಗಣಿಸಿ ಸ್ಥಳಾಂತರಗೊಳಿಸಲು ಗುರುತಿಸಲಾಗಿದ್ದ ಗ್ರಾಮಗಳು ಉನ್ನತ ಮಟ್ಟದ ಸಮಿತಿಯ ಶಿಫಾರಸ್ಸಿನಂತೆ, ಶೀತಪೀಡಿತವಾಗಿಲ್ಲವೆಂದು ಅವುಗಳನ್ನು ಸ್ಥಳಾಂತರಪಟ್ಟಿಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂ. ಆರ್.ಡಿ. 120/ಆರ್ಇಹೆಚ್ 92 (ಭಾಗ) ದಿನಾಂಕ 15–4–1999
2) ಸರ್ಕಾರದ ಆದೇಶ ಸಂ. ಕಂಇ. 215/ಆರ್ಇಹೆಚ್ 2008, ದಿನಾಂಕ 11–12–2008
3) ಹೇಮಾವತಿ ಮತ್ತು ಯಗಚಿ ಯೋಜನೆಗಳಲ್ಲಿ ಶೀತಪೀಡಿತವಾಗಿರುವ ಗ್ರಾಮಗಳನ್ನು ಗುರುತಿಸಿ ಸ್ಥಳಾಂತರಿಸಲು ಶಿಫಾರಸ್ಸು ಮಾಡುವ ಬಗ್ಗೆ ರಚಿಸಿರುವ ಸಮಿತಿಯ ದಿನಾಂಕ 2–11–2010 ಹಾಗೂ 16–11–2010 ರಂದು ಜರುಗಿದ ಸಭೆಯ ನಡವಳಿಗಳು

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಹೇಮಾವತಿ ಮತ್ತು ಯಗಚಿ ಯೋಜನೆಗಳಡಿಯಲ್ಲಿ ಶೀತಪೀಡಿತವಾಗಿರುವುದೆಂದು ಹೇಳಲಾದ ಹಲವು ಗ್ರಾಮಗಳನ್ನು ಗುರುತಿಸಿ ಸ್ಥಳಾಂತರಿಸಲು ಆದೇಶಿಸಲಾಗಿದೆ. ಹೇಮಾವತಿ ಮತ್ತು ಯಗಚಿ ಯೋಜನೆಗಳು ಪೂರ್ಣಗೊಂಡು ಹಲವು ವರ್ಷಗಳಾದರೂ ಗ್ರಾಮಗಳು ಇನ್ನೂ ಶೀತಪೀಡಿತವಾಗಿವೆಯೆಂದು ಅವುಗಳನ್ನು ಸ್ಥಳಾಂತರಿಸಬೇಕೆಂದು ಕೋರಿಕೆಗಳು ಬಂದಿರುತ್ತವೆ. ಈ ಹಿನ್ನೆಲೆಯಲ್ಲಿ, ಹೇಮಾವತಿ ಮತ್ತು ಯಗಚಿ ಯೋಜನೆಯಡಿಯಲ್ಲಿ ಶೀತಪೀಡಿತವಾಗಿರುವುದೆಂದು ಹೇಳಲಾಗಿರುವ ಗ್ರಾಮಗಳನ್ನು ಸ್ಥಳ ತನಿಖೆ ಕೈಗೊಂಡು ಶೀತಪೀಡಿತವಾಗುವುದನ್ನು ತಡೆಗಟ್ಟಲು ತಾಂತ್ರಿಕವಾಗಿ ಸಾಧ್ಯವಿಲ್ಲವೇ ಎಂಬ ಬಗ್ಗೆ ಹಾಗೂ ಶೀತಪೀಡಿತವಾಗುವುದನ್ನು ತಡೆಗಟ್ಟಲು ಸಾಧ್ಯವಿಲ್ಲದಿದ್ದಲ್ಲಿ ಗ್ರಾಮ ಸ್ಥಳಾಂತರಕ್ಕೆ ಶಿಫಾರಸ್ಸು ಮಾಡಲು ಪ್ರಾದೇಶಿಕ ಆಯುಕ್ತರು, ಮೈಸೂರು ಇವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ರಚಿಸಲಾಗಿದೆ. ಈ ಸಮಿತಿಯು ಗ್ರಾಮ ಸ್ಥಳಾಂತರಕ್ಕೆ ಈಗಾಗಲೇ ಆದೇಶವಾಗಿರುವ ಹಾಗೂ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳ್ಳದಿರುವ ಗ್ರಾಮಗಳನ್ನು ಮತ್ತು ಹೊಸದಾಗಿ ಸ್ಥಳಾಂತರಕ್ಕೆ ಬೇಡಿಕೆ ಬಂದಿರುವ ಗ್ರಾಮಗಳನ್ನು ಸಹಾ ಸ್ಥಳ ತನಿಖೆ ಮಾಡಿ ವರದಿ ನಿಡಲು ತಿಳಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ನಡವಳಿಯಂತೆ, ಪ್ರಾದೇಶಿಕ ಆಯುಕ್ತರು, ಮೈಸೂರು ಇವರು ದಿನಾಂಕ 2–11–2010 ಮತ್ತು 16–11–2010ರಂದು ಉನ್ನತಮಟ್ಟದ ಸಮಿತಿಯ ಸಭೆ ನಡೆಸಿ ಶೀತಪೀಡಿತವಾಗಿರುವ ಗ್ರಾಮಗಳ ಸ್ಥಳಾಂತರದ ಬಗ್ಗೆ ಈ ಕೆಳಕಂಡಂತೆ ಶಿಫಾರಸ್ಸುಗಳನ್ನು ಮಾಡಿರುತ್ತಾರೆ.

| ಸ್ಥಳಾಂತರ ಅಗತ್ಯವಿಲ್ಲವೆಂದು ಸಮಿತಿ ಶಿಫಾರಸ್ಸು ಮಾಡಿರುವ ಗ್ರಾಮಗಳು | ಸ್ಥಳಾಂತರ ಅಗತ್ಯವೆಂದು ಸಮಿತಿ ಶಿಫಾರಸ್ಸು ಮಾಡಿರುವ ಗ್ರಾಮಗಳು |
|---|---|
| 1) ಮುಕುಂದೂರು<br>2) ಗದ್ದೆಬಿಂಡನಹಳ್ಳಿ | 1) ಚಿಕ್ಕಗೊಂಡನಹಳ್ಳಿ |

ಮೇಲೆ ತಿಳಿಸಿರುವ ವಿವರಗಳ ಪ್ರಕಾರ ಮೈಸೂರು ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿನ ಉನ್ನತ ಮಟ್ಟದ ಸಮಿತಿ ಶಿಫಾರಸ್ಸಿನಂತೆ ಮುಕುಂದೂರು, ಗದ್ದೆಬಿಂಡನಹಳ್ಳಿ, ಶೀತಪೀಡಿತವಾಗಿರುವುದಿಲ್ಲ. ಈ 02 ಗ್ರಾಮಗಳು ಭೂಸ್ವಾಧೀನ ಕಾಯ್ದೆ ಕಲಂ 6(1)ರ ಅಧಿಸೂಚನೆ ನಂತರ ಅವಾರ್ಡ್ ಅನುಮೋದನೆಯಾಗದೆ ಅಸಿಂಧುಗೊಂಡಿರುತ್ತವೆ. ಈ ಪೈಕಿ ಮುಕುಂದೂರು ಗ್ರಾಮಸ್ಥರು ರಿಟ್ ಅರ್ಜಿ ಸಂ. 4640–4724/2011 ರಂತೆ ಮೊಕದ್ದಮೆ ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ 07–03–2011 ರಂದು ತೀರ್ಪು ನೀಡಿ ಹೊಸದಾಗಿ ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳುವಂತೆ ಹಾಗೂ ಅದನ್ನು 1 ತಿಂಗಳೊಳಗೆ ಪೂರ್ಣಗೊಳಿಸುವಂತೆ ಆದೇಶಿಸಿರುತ್ತದೆ. ಈ ತೀರ್ಪಿನ ಮೇಲೆ ಸರ್ಕಾರವು ಮೇಲ್ಮನವಿ ಸಲ್ಲಿಸಿರುತ್ತದೆ.

ಉನ್ನತಮಟ್ಟದ ಸಮಿತಿಯ ವರದಿಯ ಪ್ರಕಾರ ಈ ಗ್ರಾಮಗಳು ಶೀತಪೀಡಿತವಾಗಿರುವುದನ್ನು ತಾಂತ್ರಿಕವಾಗಿ ತಡೆಗಟ್ಟಲು ಸಾಧ್ಯವಿದ್ದು, ಸ್ಥಳಾಂತರದ ಅವಶ್ಯಕತೆ ಇರುವುದಿಲ್ಲ. ಅಲ್ಲದೆ ಮೇಲೆ ತಿಳಿಸಿದ 02 ಗ್ರಾಮಗಳು ಶೀತಪೀಡಿತವಾಗಿಲ್ಲದಿರುವುದರಿಂದ ಹಾಗೂ ಶೀತಪೀಡಿತವಾಗುವುದನ್ನು ತಾಂತ್ರಿಕವಾಗಿ ತಡೆಗಟ್ಟಲು ಸಾಧ್ಯವಿರುವುದರಿಂದ ಈ ಗ್ರಾಮಗಳ ಸ್ಥಳಾಂತರವನ್ನು ಕೈಬಿಡಲು ನಿರ್ಧರಿಸಲಾಗಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ/01/ಭೂಸ್ವಾಹ/2011, ಬೆಂಗಳೂರು, ದಿನಾಂಕ: 26–10–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಮೈಸೂರು ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿನ ಉನ್ನತಾಧಿಕಾರ ಸಮಿತಿಯು ನೀಡಿದ ಶಿಫಾರಸ್ಸನ್ನು ಒಪ್ಪಿ ಸರ್ಕಾರದ ಆದೇಶ ದಿನಾಂಕ 15–4–1999 ರನ್ವಯ ಹೇಮಾವತಿ ಹಾಗೂ ಯಗಚಿ ಯೋಜನೆಗಳಡಿಯಲ್ಲಿ ಬರುವಂತಹ ಈ ಕೆಳಕಂಡ ಗ್ರಾಮಗಳು ಶೀತಪೀಡಿತವಾಗಿಲ್ಲದಿರುವುದರಿಂದ ಅವುಗಳನ್ನು ಸ್ಥಳಾಂತರಿಸುವ ಅಗತ್ಯವಿಲ್ಲವೆಂದು ತೀರ್ಮಾನಿಸಿ ಆದೇಶಿಸಿದೆ.

1) ಮುಕುಂದೂರು

2) ಗದ್ದೆಬಿಂಡನಹಳ್ಳಿ

ಈ ಗ್ರಾಮಗಳು ಶೀತಪೀಡಿತವಾಗುವುದನ್ನು ತಡೆಗಟ್ಟಲು ಅಗತ್ಯವಾದ ತಾಂತ್ರಿಕ ಕ್ರಮಗಳನ್ನು 2 ತಿಂಗಳ ಒಳಗಾಗಿ ತೆಗೆದುಕೊಂಡು ಸರ್ಕಾರಕ್ಕೆ ವರದಿ ಮಾಡುವಂತೆ, ವ್ಯವಸ್ಥಾಪಕ ನಿರ್ದೇಶಕರು ಕಾವೇರಿ ನೀರಾವರಿ ನಿಗಮ ನಿಯಮಿತ ಬೆಂಗಳೂರು ಇವರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ಧಲಿಂಗಯ್ಯ**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ

ಪಿ.ಆರ್. 2597 (ಭೂಸ್ವಾಧೀನ, ಭೂಮಾಪನ ಮತ್ತು ಭೂದಾಖಲೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ **"ವೆಂಚರ್ ಕ್ಯಾಪಿಟಲ್ ಫಂಡ್"** ಅಡಿ 2011–12ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಿಐ 234 ಎಸ್‌ಪಿಐ 2010, ದಿನಾಂಕ 13–09–2010 ಮತ್ತು 15–03–2011.

2) ಅಪರ ನಿರ್ದೇಶಕರು (ಎಂಎಸ್ಎಂಇ) ರವರ ಪತ್ರ ಸಂಖ್ಯೆ: ಎಂಎಸ್ಎಂಇ/ ಕೈವಿಅ/ವೆಕ್ಯಾಪ/2011–12, ದಿನಾಂಕ 28–05–2011 ಮತ್ತು 27–08–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ 2011–12ನೇ ಸಾಲಿನ ಆಯವ್ಯಯದಲ್ಲಿ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗಾಗಿ "ಆಪತ್ತು ಬಂಡವಾಳ ನಿಧಿ" (Venture Capital Fund) ಗಾಗಿ ರೂ. 200.00 ಲಕ್ಷ ಒದಗಿಸಲಾಗಿದೆ. 2010–11 ಮತ್ತು 2011–12ನೇ ಸಾಲಿನಲ್ಲಿ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗಾಗಿ ವೆಂಚರ್ ಕ್ಯಾಪಿಟಲ್ ಫಂಡ್ ಯೋಜನೆಯ ಅನುಷ್ಠಾನಗೊಳಿಸಲು ಒಟ್ಟು ರೂ. 200.00 ಲಕ್ಷ ಬಂಡವಾಳ ಹೂಡಿಕೆ ಮಾಡಬೇಕಾಗಿದೆ. ಇದರಲ್ಲಿ 2010–11ನೇ ಸಾಲಿನಲ್ಲಿ ಮೇಲೆ (1)ರಲ್ಲಿ ಓದಲಾದ ಆದೇಶಗಳಲ್ಲಿ ರೂ. 100.00 ಲಕ್ಷ ಬಿಡುಗಡೆ ಮಾಡಿದೆ.

ಪ್ರಸಕ್ತ 2011–12ನೇ ಸಾಲಿನಲ್ಲಿ ಆಯವ್ಯಯದಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ರೂ. 100.00 ಲಕ್ಷಗಳನ್ನು ಸರ್ಕಾರದ ವಂತಿಗೆಯನ್ನಾಗಿ ಕೆಎಸ್ಐಐಡಿಸಿ ರವರಿಗೆ ಬಿಡುಗಡೆ ಮಾಡಲು ಅಪರ ನಿರ್ದೇಶಕರು (ಎಂಎಸ್ಎಂಇ) ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಸಿಐ 234 ಎಸ್‌ಪಿಐ 2010, ಬೆಂಗಳೂರು, ದಿನಾಂಕ: 16–09–2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ಈ ಕೆಳಕಂಡಂತೆ ಅನುಮೋದನೆಯನ್ನು ನೀಡಿದೆ.

2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "4852–02–800–0–04" Venture Capital Fund for Small & Medium Enterprises-211-Investment (Plan)" ರಡಿ ರೂ. 100.00 ಲಕ್ಷ (ರೂ. ನೂರು ಲಕ್ಷಗಳು ಮಾತ್ರ) ಗಳನ್ನು ಸರ್ಕಾರದ ವಂತಿಗೆಯಾಗಿ ಕೆಎಸ್ಐಐಡಿಸಿ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕೆಎಸ್ಐಐಡಿಸಿ ರವರು ಸ್ವೀಕೃತ ಪತ್ರಕ್ಕೆ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಮೇಲು ರುಜು ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ರವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ. ವಿ. ಶ್ರೀನಿವಾಸ ದೀಕ್ಷಿತ್**

ಪೀಠಾಧಿಕಾರಿ (ತಾಂತ್ರಿಕ ಕೋಶ)

ಪಿ.ಆರ್. 2598 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ರಾಜ್ಯದ 63 ಶೀಘ್ರವಿಲೇವಾರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರ ಹುದ್ದೆಗಳ ಸೃಜನ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 369 ಎಲ್ಎಎಂ 2000, ದಿನಾಂಕ: 29-05-2001.
2. ಸರ್ಕಾರದ ಆದೇಶ ಸಂಖ್ಯೆ: ಲಾ 11 ಎಲ್‌ಸಿಇ 2003, ದಿನಾಂಕ: 20-03-2003.
3. ಸರ್ಕಾರದ ಆದೇಶ ಸಂಖ್ಯೆ: ಲಾ 11 ಎಲ್‌ಸಿಇ 2003, ದಿನಾಂಕ: 31-10-2003.
4. ಸರ್ಕಾರದ ಆದೇಶ ಸಂಖ್ಯೆ: ಲಾ 11 ಎಲ್‌ಸಿಇ 2003, ದಿನಾಂಕ: 20-03-2004.
5. ಸರ್ಕಾರದ ಆದೇಶ ಸಂಖ್ಯೆ: ಒಇ 32 ಪಿಪಿಇ 2004, ದಿನಾಂಕ: 25-01-2005.
6. ಸರ್ಕಾರದ ಪತ್ರದ ಸಂಖ್ಯೆ: ಲಾ 139 ಎಲ್‌ಸಿಇ 2009, ದಿನಾಂಕ: 09-07-2009.
7. ಸರ್ಕಾರದ ಪತ್ರದ ಸಂಖ್ಯೆ: ಲಾ 139 ಎಲ್‌ಸಿಇ 2009, ದಿನಾಂಕ: 30-07-2009.
8. ಸರ್ಕಾರದ ಆದೇಶ ಸಂಖ್ಯೆ: ಲಾ 233 ಎಲ್‌ಸಿಇ 2009, ದಿನಾಂಕ: 04-07-2011.
9. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ-1/85/2011-12, ದಿನಾಂಕ: 04-09-2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 29-05-2001ರ ಸರ್ಕಾರದ ಆದೇಶದನ್ವಯ 13 ಶೀಘ್ರ ವಿಲೇವಾರಿ ನ್ಯಾಯಾಲಯಗಳನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 20-03-2003ರ ಸರ್ಕಾರದ ಆದೇಶದನ್ವಯ 23 ಶೀಘ್ರ ವಿಲೇವಾರಿ ನ್ಯಾಯಾಲಯಗಳನ್ನು ಮತ್ತು ಮೇಲೆ (3)ರಲ್ಲಿ ಓದಲಾದ ದಿನಾಂಕ: 31-10-2003ರ ಸರ್ಕಾರದ ಆದೇಶದನ್ವಯ 33 ಶೀಘ್ರ ವಿಲೇವಾರಿ ನ್ಯಾಯಾಲಯಗಳನ್ನು ಮತ್ತು ಮೇಲೆ (4)ರಲ್ಲಿ ಓದಲಾದ ದಿನಾಂಕ: 20-03-2004ರ ಸರ್ಕಾರದ ಆದೇಶದನ್ವಯ 33 ಶೀಘ್ರ ವಿಲೇವಾರಿ ನ್ಯಾಯಾಲಯಗಳನ್ನು ಒಟ್ಟಾರೆ 93 ಶೀಘ್ರ ವಿಲೇವಾರಿ ನ್ಯಾಯಾಲಯಗಳನ್ನು ಮುಂದಿನ ಆದೇಶದವರೆಗೆ ಸ್ಥಾಪಿಸಿ, ಸದರಿ ನ್ಯಾಯಾಲಯಗಳಿಗೆ ಒಪ್ಪಂದದ ಮೇರೆಗೆ ವೃತ್ತಿ ನಿರತ ವಕೀಲರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳ, 1977ರ 26 (2)ರನ್ವಯ ವಿಶೇಷ ಸರ್ಕಾರಿ ಅಭಿಯೋಜಕರನ್ನಾಗಿ ನೇಮಿಸಿಕೊಳ್ಳಲು ಅನುಮತಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ: 25-01-2005ರ ಸರ್ಕಾರದ ಆದೇಶದನ್ವಯ, 30 ಶೀಘ್ರ ವಿಲೇವಾರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ 30 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಸೃಜಿಸಲಾಗಿದೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ: 09-07-2009ರ ಸರ್ಕಾರದ ಪತ್ರದನ್ವಯ 29 ಶೀಘ್ರ ವಿಲೇವಾರಿ ನ್ಯಾಯಾಲಯಗಳನ್ನು ಮತ್ತು ಮೇಲೆ (7)ರಲ್ಲಿ ಓದಲಾದ ದಿನಾಂಕ: 30-07-2009ರ ಸರ್ಕಾರದ ಪತ್ರದನ್ವಯ 03 ಶೀಘ್ರ ವಿಲೇವಾರಿ ನ್ಯಾಯಾಲಯಗಳನ್ನು ಒಟ್ಟಾರೆ 32 ನ್ಯಾಯಾಲಯಗಳನ್ನು ಮಂಜೂರಾದ ಸ್ಥಳಗಳಿಂದ ನೂತನ ಸ್ಥಳಗಳಿಗೆ ಸ್ಥಳಾಂತರಿಸಲು ಅನುಮೋದನೆ ನೀಡಲಾಗಿದೆ.

ಮೇಲೆ (8)ರಲ್ಲಿ ಓದಲಾದ ದಿನಾಂಕ: 04-07-2011ರ ಸರ್ಕಾರ ಆದೇಶದನ್ವಯ 93ರಲ್ಲಿ ಇನ್ನುಳಿದ 63 ಶೀಘ್ರ ವಿಲೇವಾರಿ ನ್ಯಾಯಾಲಯಗಳ ವಿಶೇಷ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಸಹ ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅಧೀನದಿಂದ ಒಳಾಡಳಿತ ಇಲಾಖೆಯ ಅಧೀನಕ್ಕೆ ವರ್ಗಾಯಿಸಲಾಗಿದೆ.

ಮೇಲೆ (9)ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ದಿನಾಂಕ: 04-09-2011ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ: 04-08-2003ರ ಕ್ರಿಮಿನಲ್ ರಿವಿಜನ್ ಪಿಟಿಷನ್ ಸಂ: 283/2003ರಲ್ಲಿ ನೀಡಿರುವ ನಿರ್ದೇಶನದನ್ವಯ ಹಾಗೂ ಸ್ಥಳಾಂತರಗೊಂಡ 63 ಶೀಘ್ರವಿಲೇವಾರಿ ನ್ಯಾಯಾಲಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕ್ರಿಮಿನಲ್ ಪ್ರಕರಣಗಳು ಬಾಕಿ ಸಹ ಇರುವುದರಿಂದ ಸದರಿ ಕ್ರಿಮಿನಲ್ ಪ್ರಕರಣಗಳಲ್ಲಿ ಅಭಿಯೋಜನಾ ಪರವಾಗಿ ಹಾಜರಾಗಿ ರಾಜ್ಯವನ್ನು ಪ್ರತಿನಿಧಿಸಲು ಸರ್ಕಾರಿ ಅಭಿಯೋಜಕರ ಹುದ್ದೆಗಳ ಮತ್ತು ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಅತ್ಯವಶ್ಯಕವಾಗಿದ್ದು, ಸೃಜನೆಗೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 463 ಪಿಪಿಇ 2011, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2011**

ಈ ಕೆಳಕಂಡ ಶೀಘ್ರ ವಿಲೇವಾರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ 63 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಒಂದು ವರ್ಷಗದ ಅವಧಿಗೆ ಅಥವಾ ಸದರಿ ಶೀಘ್ರ ವಿಲೇವಾರಿ ನ್ಯಾಯಾಲಯಗಳು ಕಾರ್ಯನಿರತವಾಗಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮೊದಲ ಬಾರಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

| | | | |
|---|---|---|---|
| 1. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 33. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗ |
| 2. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 34. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗ |
| 3. | 11ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 35. | ಶೀಘ್ರ ವಿಲೇವಾರಿ ನ್ಯಾಯಾಲಯ, ಸಾಗರ |
| 4. | 12ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 36. | ಶೀಘ್ರ ವಿಲೇವಾರಿ ನ್ಯಾಯಾಲಯ, ಚಿತ್ರದುರ್ಗ |
| 5. | 13ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 37. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಳ್ಳಾರಿ |
| 6. | 14ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 38. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಳ್ಳಾರಿ |
| 7. | 15ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 39. | ಶೀಘ್ರ ವಿಲೇವಾರಿ ನ್ಯಾಯಾಲಯ, ಮಂಗಳೂರು |
| 8. | 16ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 40. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಕಾರವಾರ |
| 9. | 17ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ನಗರ | 41. | ಶೀಘ್ರ ವಿಲೇವಾರಿ ನ್ಯಾಯಾಲಯ, ಪುತ್ತೂರು |
| 10. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ | 42. | ಶೀಘ್ರ ವಿಲೇವಾರಿ ನ್ಯಾಯಾಲಯ, ಸಿರ್ಸಿ |

| | | | |
|---|---|---|---|
| 11. | ಶೀಘ್ರ ವಿಲೇವಾರಿ ನ್ಯಾಯಾಲಯ, ಆನೇಕಲ್ | 43. | ಶೀಘ್ರ ವಿಲೇವಾರಿ ನ್ಯಾಯಾಲಯ, ಉಡುಪಿ |
| 12. | ಶೀಘ್ರ ವಿಲೇವಾರಿ ನ್ಯಾಯಾಲಯ, ದೊಡ್ಡಬಳ್ಳಾಪುರ | 44. | ಶೀಘ್ರ ವಿಲೇವಾರಿ ನ್ಯಾಯಾಲಯ, ಕಾರ್ಕಳ |
| 13. | ಶೀಘ್ರ ವಿಲೇವಾರಿ ನ್ಯಾಯಾಲಯ, ರಾಮನಗರ | 45. | ಶೀಘ್ರ ವಿಲೇವಾರಿ ನ್ಯಾಯಾಲಯ, ಚಿಕ್ಕಮಗಳೂರು |
| 14. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ತುಮಕೂರು | 46. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 15. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ತುಮಕೂರು | 47. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 16. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ತುಮಕೂರು | 48. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 17. | ಶೀಘ್ರ ವಿಲೇವಾರಿ ನ್ಯಾಯಾಲಯ, ಮಧುಗಿರಿ | 49. | ಶೀಘ್ರ ವಿಲೇವಾರಿ ನ್ಯಾಯಾಲಯ, ಚಿಕ್ಕೋಡಿ |
| 18. | ಶೀಘ್ರ ವಿಲೇವಾರಿ ನ್ಯಾಯಾಲಯ, ತಿಪಟೂರು | 50. | ಶೀಘ್ರ ವಿಲೇವಾರಿ ನ್ಯಾಯಾಲಯ, ಅಥಣಿ |
| 19. | ಶೀಘ್ರ ವಿಲೇವಾರಿ ನ್ಯಾಯಾಲಯ, ಕೋಲಾರ | 51. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಧಾರವಾಡ |
| 20. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮೈಸೂರು | 52. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಧಾರವಾಡ |
| 21. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮೈಸೂರು | 53. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಧಾರವಾಡ |
| 22. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮೈಸೂರು | 54. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬಿಜಾಪುರ |
| 23. | 4ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮೈಸೂರು | 55. | ಶೀಘ್ರ ವಿಲೇವಾರಿ ನ್ಯಾಯಾಲಯ, ಗದಗ್ |
| 24. | ಶೀಘ್ರ ವಿಲೇವಾರಿ ನ್ಯಾಯಾಲಯ, ಮಡಿಕೇರಿ | 56. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಗುಲ್ಬರ್ಗ |
| 25. | ಶೀಘ್ರ ವಿಲೇವಾರಿ ನ್ಯಾಯಾಲಯ, ಹುಣಸೂರು | 57. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ರಾಯಚೂರು |
| 26. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮಂಡ್ಯ | 58. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೀದರ್ |
| 27. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಮಂಡ್ಯ | 59. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೀದರ್ |
| 28. | ಶೀಘ್ರ ವಿಲೇವಾರಿ ನ್ಯಾಯಾಲಯ, ಶ್ರೀರಂಗಪಟ್ಟಣ | 60. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಕೊಪ್ಪಳ |
| 29. | 1ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾಸನ | 61. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಕೊಪ್ಪಳ |
| 30. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾಸನ | 62. | ಶೀಘ್ರ ವಿಲೇವಾರಿ ನ್ಯಾಯಾಲಯ, ಯಾದಗಿರಿ |
| 31. | ಶೀಘ್ರ ವಿಲೇವಾರಿ ನ್ಯಾಯಾಲಯ, ಹೊಳೇನರಸೀಪುರ | 63. | ಶೀಘ್ರ ವಿಲೇವಾರಿ ನ್ಯಾಯಾಲಯ, ಬಸವಕಲ್ಯಾಣ |
| 32. | ಶೀಘ್ರ ವಿಲೇವಾರಿ ನ್ಯಾಯಾಲಯ, ಚನ್ನರಾಯಪಟ್ಟಣ | | |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014–0–800–1–00 EFC GRANT FOR UPGRADATION OF JUDICIAL ADMINISTRATION-101-GRANT-IN-AID" ರಡಿಯಲ್ಲಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 103 ವೆಚ್ಚ–10/2011, ದಿನಾಂಕ: 19–04–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

ಪಿ.ಆರ್. ನಂ. 2599

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಂಗವಿಕಲರ ಸ್ವಸಹಾಯ ಗುಂಪುಗಳ ಮೂಲಕ ಅಂಗವಿಕಲರಿಗೆ ಉದ್ಯೋಗಾವಕಾಶ ಕಲ್ಪಿಸಲು "ಸ್ಫೂರ್ತಿ ಸ್ವಸಹಾಯ ಯೋಜನೆ"ಯನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಮಮಇ 295 ಪಿಹೆಚ್‌ಪಿ 2006 ದಿನಾಂಕ: 26–12–2006.
2. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/ಯೋ.ಶಾ/ಸಿ.09/ಸ್ಫೂ.ಸ್ವಯೋ/03/11–12/321 ಮತ್ತು 2015, ದಿನಾಂಕ: 10–05–2011 ಮತ್ತು 26–08–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಅಂಗವಿಕಲರಿಗೆ ಉದ್ಯೋಗಾವಕಾಶ ಕಲ್ಪಿಸಲು ರಾಜ್ಯದ ಪ್ರತಿ ಜಿಲ್ಲೆಯಲ್ಲಿ ಒಂದು ತಾಲ್ಲೂಕಿನಲ್ಲಿ ಹತ್ತು ಅಂಗವಿಕಲರ ಸ್ವಸಹಾಯ ಗುಂಪುಗಳನ್ನು ಪ್ರಾಯೋಗಿಕ ಆಧಾರದ ಮೇಲೆ ರಚನೆ ಮಾಡಿ "ಸ್ಫೂರ್ತಿ ಸ್ವಸಹಾಯ ಯೋಜನೆ"ಯನ್ನು ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಿಂದ ಅನುಷ್ಠಾನಗೊಳಿಸಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರಗಳಲ್ಲಿ ಸದರಿ ಯೋಜನೆಯ ಪ್ರಕಾರ ಅಂಗವಿಕಲರು ನೈಪುಣ್ಯತೆ ಹಾಗೂ ಸ್ಥಳೀಯ ಬೇಡಿಕೆಗೆ ಅನುಗುಣವಾಗಿ ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವರು. ಸ್ವಸಹಾಯ ಗುಂಪುಗಳನ್ನು ರಚಿಸಲು ಇಲಾಖೆಯ ಕ್ಷೇತ್ರ ಕಛೇರಿಗಳು ತಾಲ್ಲೂಕು ಮಟ್ಟದಲ್ಲಿ ಲಭ್ಯವಿರುವುದಿಲ್ಲವಾದ್ದರಿಂದ ಸ್ವಸಹಾಯ ಗುಂಪುಗಳನ್ನು ರಚಿಸಲು ಉತ್ತೇಜನ ನೀಡಲು ಸ್ವಯಂಸೇವಾ ಸಂಸ್ಥೆಗಳಿಂದ ಅಂಗವಿಕಲರನ್ನು ಒಟ್ಟುಗೂಡಿಸಿ ಅವರಿಗೆ ಮಾರ್ಗದರ್ಶನ ಹಾಗೂ ಉತ್ತೇಜನ ನೀಡಿ ಸ್ವಸಹಾಯ ಗುಂಪುಗಳನ್ನು ರಚಿಸಲು ಇಲಾಖೆಯು ಉದ್ದೇಶಿಸಿದ್ದು, ಅದರಂತೆ 2006–07ನೇ ಸಾಲಿನಲ್ಲಿ ಅನುಷ್ಠಾನಗೊಳಿಸಿದ್ದ ತಾಲ್ಲೂಕುಗಳ ಗುಂಪುಗಳನ್ನು ಬಲವರ್ಧನೆಗೊಳಿಸುವುದರ ಜೊತೆಗೆ ರಾಜ್ಯದ 30 ಜಿಲ್ಲೆಗಳ ಇನ್ನುಳಿದ ತಾಲ್ಲೂಕುಗಳಲ್ಲಿ ತಾಲ್ಲೂಕನ್ನು ಕೇಂದ್ರ ಸ್ಥಾನವನ್ನಾಗಿರಿಸಿ ತಲಾ ಒಂದರಂತೆ ಅಂಗವಿಕಲರ ಸ್ವಸಹಾಯ ಗುಂಪುಗಳನ್ನು ರಚಿಸಿ ಕಾರ್ಯಕ್ರಮವನ್ನು ಸಿ.ಬಿ.ಆರ್. ನೆಟ್‌ವರ್ಕ್

ಸ್ವಯಂ ಸೇವಾ ಸಂಸ್ಥೆಯ ಸೇವೆಯನ್ನು ಬಳಸಿಕೊಂಡು ಅನುಷ್ಠಾನಗೊಳಿಸಲು ಇಲಾಖೆಯು ಉದ್ದೇಶಿಸಿದ್ದು ಅದರಂತೆ ಈ ಹಿಂದೆ ಹೊರಡಿಸಿದ್ದ ಆದೇಶಕ್ಕೆ ಕೆಲವು ಮಾರ್ಪಾಡುಗಳನ್ನು ಮಾಡುವಂತೆ ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 143 ಪಿಎಚ್‌ಪಿ 2011 ಬೆಂಗಳೂರು, ದಿನಾಂಕ: 22–10–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ದಿನಾಂಕ: 26–12–2006ರ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಯಾವುದೇ ಪುನರ್ವಸತಿ ಕಾರ್ಯಕ್ರಮದಲ್ಲಿ, ಯಶಸ್ವಿ ಹಾಗೂ ಸುಸ್ಥಿರ ನೌಕರಿಯೇ ಅಂತಿಮ ಗುರಿಯಾಗಿದೆ. ಗರಿಷ್ಠ ಮಟ್ಟದ ಸಮುದಾಯ ಸಹಭಾಗಿತ್ವವನ್ನು ಪಡೆಯಲು, ಸರ್ಕಾರೇತರ ಸಂಸ್ಥೆಗಳು ಹಾಗೂ ಸರ್ಕಾರಗಳೆರಡೂ ಇದೀಗ ಯಶಸ್ವಿಯಾಗಿ ಸ್ವಸಹಾಯ ಗುಂಪುಗಳ ಯಶಸ್ವಿ ತಂತ್ರವನ್ನು ಬಳಸಿಕೊಳ್ಳುತ್ತಿದೆ. ಬಾಂಗ್ಲಾದೇಶದ ಗ್ರಾಮೀಣ ಬ್ಯಾಂಕ್ ಪ್ರಾರಂಭಿಸಿದ ಸ್ವಸಹಾಯ ಗುಂಪುಗಳ ಯಶಸ್ಸು ಈಗ ವಿಶ್ವದಲ್ಲೇ ಜನಜನಿತವಾಗಿದೆ.

ಅಂಗವಿಕಲ ಸದಸ್ಯರನ್ನು ಹೊಂದಿರುವ ಕುಟುಂಬಗಳು ಇತರರಿಂದ ಪ್ರತ್ಯೇಕವಾಗಿ ಹಾಗೂ ಒಂಟಿಯಾಗಿ ಜೀವಿಸುತ್ತಾರೆ. ಅಂಗವಿಕಲ ವ್ಯಕ್ತಿ ಇರುವ ಕುಟುಂಬಗಳು ಬೇರೆ ಬೇರೆ ಕಡೆ ಇರುವುದರಿಂದ ಸ್ವಸಹಾಯ ಗುಂಪುಗಳು ಇಲ್ಲದಿರುವಾಗ ಅವರಿಗೆ ಪರಸ್ಪರ ನೆರವು ದೊರೆಯುವುದಿಲ್ಲ.

ಗ್ರಾಮೀಣ ಪ್ರದೇಶದ ಅಂಗವಿಕಲರನ್ನು ತಲುಪುವ ಅತ್ಯುತ್ತಮ ವಿಧಾನವೆಂದರೆ ಅಂಗವಿಕಲತೆಗಳಿರುವ ಆರ್ಥಿಕವಾಗಿ ಹಿಂದುಳಿದ ಜನರನ್ನು ಗುರಿಯಾಗಿಸಿಕೊಳ್ಳುವ ಸ್ವಸಹಾಯ ಗುಂಪುಗಳು.

ಸಾಮಾಜಿಕ ಹಾಗೂ ಆರ್ಥಿಕ ಚಟುವಟಿಕೆಗಳ ಮೂಲಕ ಸುಧಾರಿತ ಉತ್ಪನ್ನತೆ, ಗುಣಮಟ್ಟ, ಲಾಭದಾಯಕತೆ ಹಾಗೂ ಕೆಲಸದ ಪರಿಸ್ಥಿತಿಗಳಿಂದ, ಸಮುದಾಯಗಳಲ್ಲಿ ಇರುವ ಕಡುಬಡವ ಅಂಗವಿಕಲರಿಗೆ ಸೇವೆಗಳನ್ನು ಸ್ವಸಹಾಯ ಗುಂಪುಗಳು ಒದಗಿಸುತ್ತವೆ.

ಅಂಗವಿಕಲ ಸಮುದಾಯಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಉದ್ದೇಶಿಸಿ ಮೂಲಭೂತವಾಗಿ ಸ್ವಸಹಾಯ ಗುಂಪುಗಳನ್ನು ಬಳಸುವುದು ಒಂದು ತಂತ್ರವಾಗಿರುತ್ತದೆ. ಇದರಿಂದ ಕುಟುಂಬದಿಂದ ಕಡೆಗಣಿಸಲ್ಪಟ್ಟ ಅಂಗವಿಕಲ ವ್ಯಕ್ತಿಗಳು ಭಾಗವಹಿಸುವಿಕೆ, ಕಷ್ಟದ ಸಮಯಗಳಲ್ಲಿ ಪರಸ್ಪರ ನೆರವು ನೀಡುವಿಕೆ, ಕಾರ್ಯಸಾಧನೆ ವಿಧಾನದಲ್ಲಿ ನವ್ಯತೆ ವೈಯಕ್ತಿಕ ಅಗತ್ಯಗಳನ್ನು ಪೂರೈಸುವುದರೊಂದಿಗೆ ಸಮುದಾಯದ ಅಗತ್ಯಗಳನ್ನು ಪೂರೈಸುವ ಹೊಣೆಗಾರಿಕೆ ಪರಸ್ಪರ ನಂಬಿಕೆಯ ಭಾವನೆಯನ್ನು ಪೂರೈಸುವುದಾಗಿರುತ್ತದೆ.

ಅಂಗವಿಕಲತೆ ಇರುವ ಮಹಿಳೆಯರು ಯಾವುದೇ ಸಮಾಜದಲ್ಲಿ ಅತ್ಯಂತ ಕಡೆಗಣಿತ ವರ್ಗಕ್ಕೆ ಸೇರಿದವಾಗಿದ್ದು, ಅವರ ಸಮಸ್ಯೆಗಳು ಅನೇಕ ಅವುಗಳಲ್ಲಿ ಮುಖ್ಯವಾದುದ್ದೆಂದರೆ ಅವರಲ್ಲಿರುವ ಕಡುಬಡತನ ಅನಾರೋಗ್ಯತೆ, ಅನಕ್ಷರತೆಯಿಂದ ತಗ್ಗಿದ ಸ್ಥಾನಮಾನ ಹೊಂದಿದ್ದು, ಇಂತಹ ಅಂಗವಿಕಲ ಮಹಿಳೆಯರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಸ್ಥಳೀಯ ಸಂಖ್ಯೆಗೆ ಅನುಗುಣವಾಗಿ ಪ್ರತ್ಯೇಕ ಮಹಿಳಾ ಸ್ವಸಹಾಯ ಗುಂಪುಗಳನ್ನು ರಚಿಸುವುದು ಉಚಿತವಾಗುತ್ತದೆ.

ಸಮುದಾಯ ಅಭಿವೃದ್ಧಿಯ ಬಹುತೇಕ ಎಲ್ಲ ಕ್ಷೇತ್ರಗಳಲ್ಲೂ ಸ್ವಸಹಾಯ ಗುಂಪುಗಳು ಮೂಲಭೂತವಾಗಿ ಬಳಸುವ ತಂತ್ರವಾಗಿದ್ದು, ಕುಟುಂಬ ಹಾಗೂ ಸಮುದಾಯಗಳಲ್ಲಿ ಅಡಕವಾದ ಬಲಗಳ ಮೇಲೆ ಸ್ವಸಹಾಯ ಗುಂಪುಗಳನ್ನು ಕಟ್ಟಬೇಕಾಗಿದ್ದು, ಅದರಲ್ಲಿ ಸಮಾನ ಆಸಕ್ತಿಯನ್ನು ಹೊಂದಿದ ವಿವಿಧ ಜಾತಿ ಪಂಗಡಗಳ ಜನರನ್ನು ಗುಂಪುಗಳ ಮೂಲಕ ಒಟ್ಟಿಗೆ ಸೇರಿಸಿ ಅವರುಗಳು ಸಾಮಾಜಿಕ ಮತ್ತು ಆರ್ಥಿಕ ಭದ್ರತೆಗಳನ್ನು ಒದಗಿಸಲು ಸಾಧ್ಯವಾಗುವುದರಿಂದ ಸ್ವಸಹಾಯ ಗುಂಪುಗಳು ಆ ವರ್ಗದ ಜನರಿಗೆ ಬಹು ಪ್ರಯೋಜನಕಾರಿಯಾಗುತ್ತವೆ. ಸಮುದಾಯ ಮಟ್ಟದಲ್ಲಿ ಕೆಲಸ ಮಾಡುವ ಕಾರ್ಯಕರ್ತರನ್ನು ಸ್ವಸಹಾಯ ಗುಂಪುಗಳು ಹೊಂದುವುದರಿಂದ ಅವರ ಸಮಸ್ಯೆಗಳ ವಾಸ್ತವ ಪರಿಚಯ ಅವರಿಗಿದ್ದು, ಅವರೂ ಸಹ ಫಲಾನುಭವಿಗಳಾಗುವುದರಿಂದ ಭಾಗವಹಿಸುವಿಕೆಯು ಸಕ್ರಿಯವಾಗುವುದಲ್ಲದೆ, ಅವರ ಸಹಭಾಗಿತ್ವವು ಇರುತ್ತದೆ. ಇವರು ತಮ್ಮ ಸಮುದಾಯಗಳಲ್ಲಿರುವ ಅಂಗವಿಕಲ ವ್ಯಕ್ತಿಗಳ ಅಗತ್ಯಗಳನ್ನು ಪೂರೈಸಲು ಸೂಕ್ತವಾದ ತರಬೇತಿಯನ್ನು ಪಡೆದು ಸರಿಯಾದ ಚಿಂತನೆಯನ್ನು ಹೊಂದಿರುತ್ತಾರೆ.

**ಯೋಜನೆಯ ವಿವರಗಳು ಈ ಕೆಳಗಿನಂತಿರುತ್ತವೆ.**

**1. ಸ್ವಸಹಾಯ ಗುಂಪುಗಳ ಉದ್ದೇಶ:–**

1. ವ್ಯಕ್ತಿ ಹಾಗೂ ಸಮುದಾಯಕ್ಕೆ ಸಂಬಂಧಿಸಿದ ಅಗತ್ಯಗಳನ್ನು ಗುರುತಿಸಲು ಹಾಗೂ ಅನುಭವ ಹಂಚಿಕೆಗಾಗಿ ವೇದಿಕೆಯನ್ನು ಒದಗಿಸುವುದು ಅದು ಬಲಗಳು ಹಾಗೂ ಸಾಮರ್ಥ್ಯಗಳನ್ನು ಗುರುತಿಸಿ ಅದನ್ನು ವೃದ್ಧಿಸುವುದು.
2. ಕಷ್ಟದ ಸಮಯದಲ್ಲಿ ಪರಸ್ಪರ ನೆರವಿಗೆ ಅನುವು ಮಾಡುವುದು.
3. ಇತರ ಸಮರ್ಥನಾ ಗುಂಪುಗಳೊಂದಿಗೆ ವ್ಯಕ್ತಿಗತ ಹಾಗೂ ಗುಂಪು ಸಮರ್ಥನೆ ಹಾಗೂ ನೆಟ್‌ವರ್ಕ್‌ನ/ಸಂಪರ್ಕ ನಿರ್ಮಾಣದ ಉತ್ತೇಜನ.
4. ಅಂಗವಿಕಲರಲ್ಲಿ ಅಡಗಿರುವ ಕೌಶಲ್ಯತೆಯನ್ನು ಗುರುತಿಸಿ ಅದಕ್ಕನುಗುಣವಾಗಿ ಉತ್ಪಾದನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.
5. ಅಂಗವಿಕಲರನ್ನು ಒಟ್ಟುಗೂಡಿಸಿ ಗುಂಪುಗಳನ್ನು ರಚಿಸಿ ಸಾಮೂಹಿಕ ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡುವುದು.
6. ಉತ್ಪಾದನಾ ಕೆಲಸ ಮಾಡಲು ತಾಂತ್ರಿಕ ತರಬೇತಿ ನೀಡುವುದು.
7. ಸಾಮೂಹಿಕ ಜೀವನ ಹಾಗೂ ಸ್ವಸಹಾಯ ಗುಂಪುಗಳ ಲೆಕ್ಕಪತ್ರಗಳ ನಿರ್ವಹಣೆ ಬಗ್ಗೆ ಅರಿವು ಮೂಡಿಸುವುದು.
8. ವಿವಿಧ ಉತ್ಪನ್ನಗಳಿಗೆ ಮಾರುಕಟ್ಟೆ ಜಾಲವನ್ನು ಒದಗಿಸಲು ವಿವಿಧ ಅವಕಾಶಗಳನ್ನು ಗುರುತಿಸುವುದು.
9. ಸ್ವಯಂ ಉದ್ಯೋಗದಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಳ್ಳುವಂತೆ ಪ್ರೇರಣೆ ನೀಡುವುದು.
10. ಗುಂಪಿನ ಸದಸ್ಯರಲ್ಲಿ ಉಳಿತಾಯ ಮನೋಭಾವನೆ ಬೆಳಸಿ ಸಣ್ಣ ಉದ್ದಿಮೆ/ಸ್ವಯಂ ಉದ್ಯೋಗದಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಿಸುವುದು.

**2. ಸ್ವಸಹಾಯ ಗುಂಪುಗಳ ಚಟುವಟಿಕೆಗಳು:**

1. ಸ್ವಂತ ಹಾಗೂ ಸಣ್ಣ ಗುಂಪನ್ನು ಪ್ರಾರಂಭಿಸಲು, ಗುಂಪಾಗಿ ಸಂಘಟಿತವಾಗಿ ಕೆಲಸ ಮಾಡುವುದು.

2. ನಿಯಮಿತವಾದ ಮನರಂಜನಾ ಕೇಂದ್ರಗಳ ಸ್ಥಾಪನೆ
3. ಆಪ್ತ ಸಮಾಲೋಚನಾ ಕೇಂದ್ರಗಳ ಸ್ಥಾಪನೆ
4. ದೂರ ಶಿಕ್ಷಣ, ಬ್ರೈಲ್ ಹಾಗೂ ಮಾತನಾಡುವ ಗ್ರಂಥಾಲಯಗಳು, ಆಟದ ಲೈಬ್ರರಿಗಳು, ಕಲಿಕಾ ಸಾಮಗ್ರಿಗಳು ಹಾಗೂ ಇತರೆ ಉಪಯುಕ್ತ ಸಾಧನಗಳ ಲಭ್ಯತೆ/ಪ್ರಾರಂಭ.
5. ಮಾಹಿತಿ ಕೇಂದ್ರ ಅದರಲ್ಲೂ ಸರ್ಕಾರಿ ಯೋಜನೆಗಳಿಗಾಗಿ ಮಾಹಿತಿ ಕೇಂದ್ರಗಳ ಸ್ಥಾಪನೆ
6. ಒತ್ತಡದ ಗುಂಪುಗಳನ್ನು ಬೆಳೆಸುವುದು.
7. ಪೋಷಕರ ಸಾವಿನ ನಂತರ ಆರೈಕೆ ಹಾಗೂ ನೆರವಿನ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು, ತೀವ್ರತರವಾದ ಅಂಗವಿಕಲರ ಸದಸ್ಯರನ್ನು ಒಳಗೊಂಡ ಕುಟುಂಬಗಳ ಟ್ರಸ್ಟ್‌ಗಳ ಉತ್ತೇಜನ.

**3. ಸ್ವಸಹಾಯ ಗುಂಪುಗಳ ಸಂಪನ್ಮೂಲಗಳು:**

1. ಅಂಗವಿಕಲತೆಗಳಿರುವ ವಯಸ್ಕರು ಹಾಗೂ ಅಂಗವಿಕಲತೆ ಇರುವ ಸದಸ್ಯರಿರುವ ಕುಟುಂಬಗಳು ಸ್ವಯಂ ಸೇವೆಯನ್ನು ಸಲ್ಲಿಸಬೇಕು.
2. ಪ್ರಸ್ತುತವಿರುವ ಮನರಂಜನಾ ಕೇಂದ್ರಗಳೊಂದಿಗೆ ಗ್ರಾಮ ಸಮುದಾಯದಲ್ಲಿ ಪ್ರಸ್ತುತವಾಗಿ ಲಭ್ಯವಿರುವ ಸೌಕರ್ಯಗಳಾದ ಶಾಲಾ ಕಟ್ಟಡ, ಸಮುದಾಯ ಭವನದೊಂದಿಗೆ ಮನರಂಜನಾ ಚಟುವಟಿಕೆಗಳನ್ನು ಒಗ್ಗೂಡಿಸುವುದು.
3. ಮಾನಸಿಕವಾಗಿ ವೈಕಲ್ಯತೆ ಹೊಂದಿದ ವ್ಯಕ್ತಿಗಳಿಗಾಗಿ ಸ್ವಂತ ಹಾಗೂ ಗುಂಪು ಸಶಕ್ತತಾ ವಿಮೆಗೆ ನೆರವಾಗಲು ಬಡತನ ನಿವಾರಣೆಗಾಗಿ ಸರ್ಕಾರಿ ಯೋಜನೆಗಳು, ಸದಸ್ಯರಿಗೆ ಸ್ವಸಹಾಯ ಸಾಲಗಳು.
4. ಗುಂಪಿನಲ್ಲಿರುವ ಅಂಗವಿಕಲ ಸದಸ್ಯರಿಗಾಗಿ ಉದ್ಯೋಗಗಳನ್ನು ಕಲ್ಪಿಸಲು ಕೌಟುಂಬಿಕ ವ್ಯಾಪಾರ ಹಾಗೂ ಸ್ಥಳೀಯ ವ್ಯಾಪಾರಿಗಳನ್ನು ಸಂಘಟಿತಗೊಳಿಸುವುದು.

**4. ಸ್ವಸಹಾಯ ಗುಂಪುಗಳ ರಚನೆ/ವಿನ್ಯಾಸ (Structure) ಹಾಗೂ ಕರ್ತವ್ಯಗಳು:–**

1. ಅಂಗವಿಕಲರಿಗೆ ಉದ್ಯೋಗಾವಕಾಶ ಕಲ್ಪಿಸಿ ಸ್ವಯಂ ಉದ್ಯೋಗಿಗಳನ್ನಾಗಿ ಮಾಡುವುದು ಮುಖ್ಯ ಉದ್ದೇಶವಾಗಿರುತ್ತದೆ. 18 ರಿಂದ 45 ವರ್ಷದೊಳಗಿನ ಅಂಗವಿಕಲರನ್ನು ಗುರುತಿಸಿ ಗುಂಪುಗಳನ್ನಾಗಿ ರಚಿಸುವುದು. ಒಂದು ಸ್ವಸಹಾಯ ಗುಂಪು ಕನಿಷ್ಠ 5 ರಿಂದ 12 ಫಲಾನುಭವಿಗಳನ್ನು ಒಳಗೊಂಡಿರುತ್ತದೆ.
2. ಸ್ವಸಹಾಯ ಗುಂಪುಗಳ ಅಂಗವಿಕಲರ ಪೈಕಿ ಇಬ್ಬರನ್ನು ಗುಂಪಿನ ಮುಖಂಡರನ್ನಾಗಿ ಆಯ್ಕೆಮಾಡುವುದು, ಹಾಗೂ ಅವರನ್ನು ಪ್ರತಿನಿಧಿ–1 ಮತ್ತು 2 ಎಂದು ಹೆಸರಿಸುವುದು, ಅವರು ಆ ಸ್ಥಾನದಲ್ಲಿ, ಕನಿಷ್ಠ 06 ತಿಂಗಳ ಅವಧಿಯವರೆಗೆ ಕಾರ್ಯ ನಿರ್ವಹಿಸತಕ್ಕದ್ದು, ಇವರಿಗೆ ಲೆಕ್ಕಪತ್ರ ನಿರ್ವಹಣೆ ಮತ್ತು ದಿನನಿತ್ಯದ ಚಟುವಟಿಕೆಗಳ ಬಗ್ಗೆ ಸ್ವಯಂ ಸೇವಾ ಸಂಸ್ಥೆಯು ತರಬೇತಿ ನೀಡಬೇಕಾಗಿದೆ.
3. ಗುಂಪಿನ ಪ್ರತಿನಿಧಿ–1 ಮತ್ತು ಸ್ವಯಂ ಸೇವಾ ಸಂಸ್ಥೆಯ ಕಾರ್ಯದರ್ಶಿಯ ಜಂಟಿ ಹೆಸರಿನಲ್ಲಿ ಬ್ಯಾಂಕ್ ಖಾತೆ ತೆರೆಯುವುದು.
4. ಈ ಖಾತೆಯಲ್ಲಿ ಸರ್ಕಾರದಿಂದ ನೀಡುವ ಸುತ್ತುನಿಧಿಯನ್ನು ಠೇವಣಿಯಿಟ್ಟು ಈ ಠೇವಣಿ ಆಧಾರದ ಮೇರೆಗೆ ಬ್ಯಾಂಕಿನಿಂದ ಸಾಲಪಡೆದು ಉತ್ಪಾದನೆಗೆ ಬೇಕಾದ ಯಂತ್ರೋಪಕರಣ ಮತ್ತು ಕಚ್ಚಾ ವಸ್ತುಗಳನ್ನು ಖರೀದಿಸುವುದು.
5. ಬ್ಯಾಂಕಿನಿಂದ ಪಡೆದ ಸಾಲವನ್ನು ಪ್ರತಿ ತಿಂಗಳು ಕಂತುಗಳಲ್ಲಿ ತೀರಿಸಿ ಪುನಃ ಬೇಕಾದಲ್ಲಿ ಅಗತ್ಯವಿರುವ ಹಣಕಾಸಿನ ಸೌಲಭ್ಯವನ್ನು ಬ್ಯಾಂಕಿನಿಂದ ಪಡೆಯುವುದು.
6. ಮೇಲಿನ ಉತ್ಪಾದನಾ ಕ್ರಿಯೆಯಿಂದ ಲಭ್ಯವಾಗುವ ಲಾಭಾಂಶವನ್ನು ಸ್ವಸಹಾಯ ಗುಂಪಿನ ಸದಸ್ಯರು ಸಮನಾಗಿ ಹಂಚಿಕೊಳ್ಳುವುದು.
7. ಸಂಘದ ಸದಸ್ಯರು ತಿಂಗಳಿಗೆ ತಲಾ ಕನಿಷ್ಟ ರೂ. 25.00 ರಂತೆ ಉಳಿತಾಯ ಮಾಡತಕ್ಕದ್ದು. ಈ ಮೊತ್ತವನ್ನು ಬ್ಯಾಂಕಿನ ಖಾತೆಯಲ್ಲಿ ಗುಂಪಿನ ಹೆಸರಿನಲ್ಲಿ ಜಮಾ ಮಾಡತಕ್ಕದ್ದು, ಹಾಗೂ ಪ್ರತಿ ಸದಸ್ಯರಿಗೆ ಅವರ ಉಳಿತಾಯದ ಬಗ್ಗೆ ಮಾಹಿತಿಯನ್ನು ಪುಸ್ತಕ(ನೋಟ್ ಬುಕ್)ದಲ್ಲಿ ನಮೂದಿಸತಕ್ಕದ್ದು.
8. ಸದಸ್ಯರ ಉಳಿತಾಯದ ಮೊಬಲಗನ್ನು ಗುಂಪಿನ ಪಾಲಾಗಿ ತೊಡಗಿಸಿಕೊಳ್ಳುವ ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು. ಈ ಕಾರ್ಯಕ್ಕೆ ಗುಂಪಿನ ಎಲ್ಲಾ ಸದಸ್ಯರು ಸಮಾನ ಜವಾಬ್ದಾರಿ ಹೊಂದಿರುತ್ತಾರೆ.
9. ಗುಂಪಿನ ಸದಸ್ಯರು ಅನಿವಾರ್ಯವಾಗಿ ಗುಂಪಿನ ಸದಸ್ಯತ್ವ ಹಿಂದಕ್ಕೆ ಪಡೆದಲ್ಲಿ ಗುಂಪನ್ನು ಬಿಟ್ಟಲ್ಲಿ ಅವರ ಉಳಿತಾಯದ ಒಟ್ಟು ಮೊಬಲಗನ್ನು ಬಡ್ಡಿರಹಿತವಾಗಿ ಪಡೆಯಲು ಅರ್ಹರಾಗಿರುತ್ತಾರೆ. ಮರಣ ಹೊಂದಿದಲ್ಲಿ ಮಾತ್ರ ಸದರಿ ಮೊತ್ತವನ್ನು ಅವರ ವಾರಸುದಾರರಿಗೆ ನೀಡತಕ್ಕದ್ದು.

**5. ಸದಸ್ಯರ ಆಯ್ಕೆ:**

ಫಲಾನುಭವಿಗಳ ಆಯ್ಕೆಯನ್ನು ಸ್ವಯಂ ಸೇವಾ ಸಂಸ್ಥೆಯವರು ಹಾಗೂ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಮಾಡುವರು. ಅದಕ್ಕೆ ಸ್ವಯಂ ಸೇವಾ ಸಂಸ್ಥೆಯಿಂದ ತರಬೇತಿ ಪಡೆದ ನುರಿತ ವ್ಯಕ್ತಿಗಳನ್ನು ನೇಮಕ ಮಾಡಿಕೊಳ್ಳಬೇಕಾಗುತ್ತದೆ. ಒಂದು ಸ್ವಸಹಾಯ ಗುಂಪಿನಲ್ಲಿ 5 ರಿಂದ 12 ಜನ ಸದಸ್ಯರಿದ್ದು, ಗುಂಪಿನ ಸದಸ್ಯರಾಗಲು ಅಂಗವಿಕಲತೆ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಹಾಗೂ ಬಿ.ಪಿ.ಎಲ್. ಕಾರ್ಡ್ ಒದಗಿಸಬೇಕಾಗುತ್ತದೆ. ಬುದ್ಧಿಮಾಂದ್ಯ, ಬಹುವಿಧ ಹಾಗೂ ತೀರ್ವತೆರನಾದ ಅಂಗವಿಕಲರ ಬದಲಿಗೆ ಅವರ ಪೋಷಕರನ್ನು ಸ್ವಸಹಾಯ ಗುಂಪುಗಳ ಸದಸ್ಯರನ್ನಾಗಿ ಸೇರಿಸಿಕೊಳ್ಳಲಾಗುವುದು ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಮಹಿಳೆಯರನ್ನು ಈ ಗುಂಪಿಗೆ ಸದಸ್ಯರನ್ನಾಗಿ ಮಾಡುವಾಗ ಮೀಸಲಾತಿ ಅನ್ವಯ ನೀಡಲಾಗುವುದು.

**6. ಜಿಲ್ಲೆಯಲ್ಲಿ ತಾಲ್ಲೂಕುಗಳನ್ನು ಆಯ್ಕೆ ಮಾಡುವ ವಿಧಾನ:**

ಪ್ರಥಮ ಹಂತದಲ್ಲಿ ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸಿದ್ದ, ತಾಲ್ಲೂಕನ್ನು ಹೊರತುಪಡಿಸಿ ಇನ್ನುಳಿದ 147 ತಾಲ್ಲೂಕುಗಳಲ್ಲಿ 18 ರಿಂದ 45 ವರ್ಷದೊಳಗಿನ ನಿರುದ್ಯೋಗಿ ಅಂಗವಿಕಲರ ಸಂಖ್ಯೆಯ ಆಧಾರದಲ್ಲಿ ತಲಾ 1 ಅಂಗವಿಕಲರ ಸ್ವಸಹಾಯ ಗುಂಪನ್ನು ತಾಲ್ಲೂಕು ಕೇಂದ್ರದಲ್ಲಿಯೇ ಯೋಜನೆಯ ಅನುಷ್ಠಾನವನ್ನು ಇಲಾಖೆಯ ಆಯ್ಕೆಮಾಡುವುದು.

**7. ಅನುಷ್ಠಾನಗೊಳಿಸುವಿಕೆ:**

ಈ ಯೋಜನೆಯನ್ನು ಈಗಾಗಲೇ ಅನುಷ್ಠಾನಗೊಳಿಸಿರುವ ತಾಲ್ಲೂಕನ್ನು ಹೊರತುಪಡಿಸಿ ಇನ್ನುಳಿದ 147 ತಾಲ್ಲೂಕುಗಳಲ್ಲಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಅಂಗವಿಕಲರಿಗಾಗಿ ಸಮುದಾಯ ಆಧಾರಿತ ಪುನರ್ವಸತಿ ಕಾರ್ಯಕ್ರಮ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ "ಉದೀಷಾ ಪೋರ್ಟೆಜ್" ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಿರುವ ಸಿ.ಬಿ.ಆರ್. ನೆಟ್‌ವರ್ಕ್ (ಸೌತ್ ಏಷಿಯಾ), ಬೆಂಗಳೂರು ಈ ಸ್ವಯಂ ಸೇವಾ ಸಂಸ್ಥೆಯ ಸಹಯೋಗದೊಂದಿಗೆ ತಾಲ್ಲೂಕಿಗೆ 1 ರಂತೆ ಅಂಗವಿಕಲರ ಸ್ವಸಹಾಯ ಗುಂಪುಗಳನ್ನು ರಚಿಸುವುದು.

**8. ಸುತ್ತುನಿಧಿ:**

ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಪ್ರತಿಯೊಂದು ಗುಂಪು ರಚನೆಯಾಗಿರುವ ಬಗ್ಗೆ ಸ್ವಯಂ ಸೇವಾ ಸಂಸ್ಥೆಯಿಂದ ಹಾಗೂ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಂದ ಸ್ಥಿರೀಕರಣ ಪಡೆದು ಹಣ ಬಿಡುಗಡೆಗೆ ನಿರ್ದೇಶಕರಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು. ಸರ್ಕಾರದ ವತಿಯಿಂದ ಪ್ರತಿ ಗುಂಪಿಗೆ ಸುತ್ತಿತ್ತುನಿಧಿ ರೂ. 25,000/–ಗಳನ್ನು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ ಮುಖಾಂತರ ನೀಡಲಾಗುವುದು. ಗುಂಪಿನ ಸದಸ್ಯರು ಉಳಿತಾಯ ಹಾಗೂ ಈ ಸುತ್ತುನಿಧಿಯನ್ನು ಬಳಸಿಕೊಂಡು ತಮ್ಮ ಚಟುವಟಿಕೆಗಳನ್ನು ನಡೆಸುವುದು. ಸದಸ್ಯರು ಪಡೆದ ಸಾಲವನ್ನು ಸಕಾಲಕ್ಕೆ ಪಾವತಿಸುತ್ತಿರುವ ಬಗ್ಗೆ ಅಥವಾ ಮತ್ತಾವುದೇ ತೊಂದರೆ ಹಾಗೂ ದುರುಪಯೋಗದ ಬಗ್ಗೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಸತತ ಉಸ್ತುವಾರಿ ಮಾಡುವುದು.

**9. ಸ್ವಯಂ ಸೇವಾ ಸಂಸ್ಥೆಗಳ ಕರ್ತವ್ಯಗಳು:**

1. ಯೋಜನೆಯ ಅನುಷ್ಠಾನಕ್ಕೆ ಸ್ವಯಂಸೇವಾ ಸಂಸ್ಥೆಯು ತಾಲ್ಲೂಕು ಮಟ್ಟದಲ್ಲಿ ಸ್ನಾತಕೋತ್ತರ ಪದವೀಧರರಾದ ಒಬ್ಬ ಸಂಚಾಲಕರು ಹಾಗೂ ಪದವೀಧರರಾದ ಒಬ್ಬ ಸ್ವಯಂ ಸೇವಕರನ್ನು 6 ತಿಂಗಳ ಗೌರವಧನ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ.
2. ಫಲಾನುಭವಿಗಳನ್ನು ಗುರುತಿಸಿ ಪ್ರೇರೇಪಿಸುವುದು; ಗುಂಪುಗಳ ರಚನೆ ಮಾಡುವುದು ಗುಂಪುಗಳ ಸದಸ್ಯರುಗಳಿಗೆ ಗುಂಪು ನಿರ್ವಹಣೆ, ದಾಖಲೆಗಳ ನಿರ್ವಹಣೆ, ಬ್ಯಾಂಕಿನ ವಹಿವಾಟಿನ ಅರಿವು ಮೂಡಿಸುವುದು, ಸರ್ಕಾರಿ ಸೌಲಭ್ಯಗಳ ಬಗ್ಗೆ ಅರಿವು ನೀಡುವುದು, ಕೌಶಲ್ಯತೆಗೆ ಅನುಗುಣವಾಗಿ ಹಾಗು ಸ್ಥಳೀಯ ಸಂಪನ್ಮೂಲ ಹಾಗೂ ಬೇಡಿಕೆಗಳ ಅನುಸಾರ ಸ್ವಯಂ ಉದ್ಯೋಗವನ್ನು ಆಯ್ಕೆ ಮಾಡಕೊಳ್ಳಲು ಗುಂಪಿನ ಸದಸ್ಯರಿಗೆ ಮಾಹಿತಿ, ತರಬೇತಿ ಹಾಗೂ ಮಾರ್ಗದರ್ಶನ ನೀಡಬೇಕಾಗುತ್ತದೆ.
3. ಸಹಾಯಧನ ಮತ್ತು ಸಾಲಧನದ ರೂಪದಲ್ಲಿ ದೊರಕುವ ಹಣ ಸಮರ್ಥವಾಗಿ ಉಪಯೋಗಿಸಲು ಪ್ರತಿ ಗುಂಪಿಗೆ ಎಸ್.ಬಿ. ಖಾತೆಗಳನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ; ನಬಾರ್ಡ್ ಅಂಗೀಕೃತ ಬ್ಯಾಂಕ್‌ಗಳಲ್ಲಿ ತೆರೆಯುವುದು ಹಾಗೂ ಹಣ ವಿತರಣೆ ಮತ್ತು ಸಾಲ ಮರುಪಾವತಿಯು ಸ್ವಯಂ ಸೇವಾ ಸಂಸ್ಥೆಯ ಕಾರ್ಯದರ್ಶಿ ಮತ್ತು ಗುಂಪಿನ ಪ್ರತಿನಿಧಿ–1 ಇವರ ಜಂಟಿ ಸಹಿಯೊಂದಿಗೆ ನಿರ್ವಹಿಸಬೇಕಾಗುತ್ತದೆ.
4. ವೃತ್ತಿಗನುಗುಣವಾಗಿ ತರಬೇತಿಯನ್ನು ನೀಡುವುದು ಸ್ವಯಂ ಸೇವಾ ಸಂಸ್ಥೆಯ ಜವಾಬ್ದಾರಿಯಾಗಿರುತ್ತದೆ. ಉತ್ತಮವಾದ ತರಬೇತಿಯನ್ನು ನೀಡಿ ಸ್ವಸಹಾಯ ಗುಂಪುಗಳನ್ನು ಸ್ವಯಂ ಉದ್ಯೋಗದಲ್ಲಿ ತೊಡಗಿಸಲು ಅನುವು ಮಾಡಿಕೊಡಬೇಕಾಗಿರುತ್ತದೆ.
5. ಸ್ಥಳೀಯ ಮಾರುಕಟ್ಟೆ ಮತ್ತು ಕಚ್ಚಾ ವಸ್ತುಗಳ ಲಭ್ಯತೆಗೆ ಅನುಗುಣವಾಗಿ ಪದಾರ್ಥಗಳ ಉತ್ಪಾದನೆಯನ್ನು ಕೈಗೊಳ್ಳಬೇಕಾಗುತ್ತದೆ.
6. ಉತ್ಪಾದಿತ ವಸ್ತುಗಳನ್ನು ಲಾಭದಾಯಕ ರೀತಿಯಲ್ಲಿ ಮಾರಾಟ ಮಾಡುವುದು ಅವಶ್ಯಕವಾಗಿರುತ್ತದೆ. ಮಾರುಕಟ್ಟೆ ವ್ಯವಸ್ಥೆಯನ್ನು ಸ್ವಯಂ ಸೇವಾ ಸಂಸ್ಥೆಯ ಬೇಡಿಕೆ ಇರುವ ಸಂಸ್ಥೆಗಳ ಸಹಯೋಗದೊಂದಿಗೆ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸಬೇಕಾಗುತ್ತದೆ.
7. ಸ್ವಯಂ ಸೇವಾ ಸಂಸ್ಥೆಯು ವಿವಿಧ ಉತ್ಪನ್ನಗಳ ಪರಿಚಯ, ಅವುಗಳ ಉಪಯುಕ್ತತೆ, ತಾಂತ್ರಿಕತೆ, ಕಚ್ಚಾಸಾಮಗ್ರಿಗಳ ಲಭ್ಯತೆ ಉತ್ಪಾದನೆಯ ಸಮಯ, ಇರುವ ಮಾರುಕಟ್ಟೆ ವ್ಯವಸ್ಥೆ, ಪಡೆಯಬಹುದಾದ ಲಾಭಾಂಶ ನಿರಂತರ ಉಳಿಯುವಿಕೆ ಮತ್ತು ಆಯ್ಕೆ ಬಗ್ಗೆ ಕೌಶಲ್ಯ ತರಬೇತಿ ನೀಡಬೇಕಾಗುತ್ತದೆ.
8. ಖರ್ಚುವೆಚ್ಚಗಳ ಅಂದಾಜು ಆಯವ್ಯಯದ ತಯಾರಿಕೆ ಅಗತ್ಯತೆಗನುಗುಣವಾಗಿ ಯೋಜನಾ ವರದಿ ತಯಾರಿಸುವುದು.
9. ಎನ್.ಹೆಚ್.ಎಫ್.ಡಿ.ಸಿ. ಅಥವಾ ಇತರೆ ರಾಷ್ಟ್ರೀಕೃತ ಹಾಗೂ ಗ್ರಾಮೀಣ ಬ್ಯಾಂಕ್ ಮತ್ತು ಪಂಚಾಯತ್ ರಾಜ್ ಆಯವ್ಯಯದಲ್ಲಿ ನಿಗದಿಪಡಿಸಿರುವ ಶೇ. 3ರಷ್ಟು ಆಯವ್ಯಯದಲ್ಲಿ ಬಳಸಿಕೊಂಡು ಸರ್ಕಾರ ನೀಡಿರುವ ಸುತ್ತುನಿಧಿ ಬಾಬ್ತಿನ ಮೇಲೆ ಬಂಡವಾಳ (Working Capital) ಸಲುವಾಗಿ ಯೋಜನೆಗೆ ಅನುಗುಣವಾಗಿ ಸಾಲ ಪಡೆಯಲು ಸ್ವಯಂ ಸೇವಾ ಸಂಸ್ಥೆ (ಎನ್.ಜಿ.ಓ) ಏರ್ಪಾಡು ಮಾಡಬೇಕು.
10. ಈಗಾಗಲೇ ರಚಿಸಿರುವ ಎಲ್ಲ ಗುಂಪಿನ ಸದಸ್ಯರುಗಳಿಗೆ ಗುಂಪಿನ ಚಟುವಟಿಕೆಗಳ ಬಲವರ್ಧನೆಗೊಳಿಸುವುದು.

**9 ಸ್ವಸಹಾಯ ಗುಂಪುಗಳಿಗೆ ತರಬೇತಿ ಹಾಗೂ ಕಿರುಸಾಲದ ಪ್ರಮಾಣೀಕೃತ ಕೋರ್ಸ್:**

ಫಲಾನುಭವಿಗಳಿಗಾಗಿ ಉತ್ತಮವಾಗಿ ವಿನ್ಯಾಸಗೊಳಿಸಲಾದ, ಸ್ಥಳೀಯವಾಗಿ ಸೂಕ್ತವಾದ ತರಬೇತಿ ಕಾರ್ಯಕ್ರಮ ಇಲ್ಲದಿದ್ದಲ್ಲಿ ಸ್ವಸಹಾಯ ಗುಂಪುಗಳು ಹಾಗೂ ಕಿರುಸಾಲಗಳು ಯಶಸ್ವಿಯಾಗದೆ ಕಾರಣ ಸುಸ್ಥಿರ ಸ್ವಸಹಾಯ ಗುಂಪುಗಳನ್ನು ಕಟ್ಟಲು ಬೆಂಗಳೂರು ವಿಶ್ವವಿದ್ಯಾಲಯದ ಮನಃಶಾಸ್ತ್ರ ವಿಭಾಗದೊಂದಿಗೆ ಸಂಘಟಿತವಾಗಿ ಸಿ.ಬಿ.ಆರ್. ನೆಟ್‌ವರ್ಕ್, ಸ್ವಸಹಾಯ ಗುಂಪು ಹಾಗೂ ಕಿರುಸಾಲ ಕುರಿತಾದ ಒಂದು ತಿಂಗಳಿನ ಪ್ರಮಾಣಿಕ ಕೋರ್ಸ್‌ನ್ನು ನಡೆಸುತ್ತಿದ್ದು, ಸ್ವಸಹಾಯ ಗುಂಪುಗಳು ಹಾಗೂ ಕಿರುಸಾಲಕ್ಕೆ ಸೇರಲು ಇಚ್ಚಿಸುವ ಅಂಗವಿಕಲ ವ್ಯಕ್ತಿಗಳಿಗೆ ಈ ಕೋರ್ಸ್‌ನ್ನು ಪೂರ್ಣಗೊಳಿಸುವಂತೆ ಕ್ರಮವಹಿಸುವುದು. ಪ್ರತಿ ಗ್ರಾಮ ಪಂಚಾಯತಿಯಲ್ಲಿ ಸಾಮರ್ಥ್ಯ ಬೆಳವಣಿಗೆಗೆ ಸಂಬಂಧಿಸಿದಂತೆ, 20 ಜನರಿರುವ ಒಂದು ಗುಂಪಿಗೆ ತರಬೇತಿ, ಜಿಲ್ಲಾ ಮಟ್ಟದಲ್ಲಿ ಪ್ರತಿ ಜಿಲ್ಲೆಯಿಂದ ಇಬ್ಬರಂತೆ, ಇಬ್ಬರು ಪ್ರತಿನಿಧಿಗಳಿಗೆ ಸ್ವಸಹಾಯ ಗುಂಪುಗಳಿಗೆ ಸದಸ್ಯರಾಗಲು ಹಾಗೂ ನಿರ್ವಹಣೆ ಮಾಡುವಂತೆ ಜನರನ್ನು ಪ್ರೇರೇಪಿಸಲು ಸ್ಥಳೀಯವಾಗಿ ಸೂಕ್ತವಾದ ತರಬೇತಿ ಕಾರ್ಯಕ್ರಮ ಹಮ್ಮಿಕೊಳ್ಳುವುದು, ಇತರ ಗ್ರಾಮೀಣ ಅಭಿವೃದ್ಧಿ ಚಟುವಟಿಕೆಗಳೊಂದಿಗೆ ಸಂಪರ್ಕ ಹಾಗೂ ಅಂಗವಿಕಲತೆಗಳಿರುವ ವ್ಯಕ್ತಿಗಳ ಸೇರ್ಪಡೆಗಳಿಗೆ ಉತ್ತೇಜನ ಮತ್ತು ವ್ಯಾಪಾರದ ನೆರವನ್ನು ಪಡೆಯಲು ಸಮಾಲೋಚಕರಿಗೆ ತರಬೇತಿ ಕಾರ್ಯಕ್ರಮ ಹಮ್ಮಿಕೊಳ್ಳುವುದು.

**10 ಸ್ವಸಹಾಯ ಗುಂಪಿನನ ಕಿರುಸಾಲ ಯೋಜನೆ:**

1. ಸ್ವಸಹಾಯ ಗುಂಪಿನ ಕಿರುಸಾಲ ಯೋಜನೆಯಿಂದ ಅಂಗವಿಕಲರಲ್ಲಿರುವ ಉದ್ಯೋಗ ಸಾಮರ್ಥ್ಯವನ್ನು ವೃದ್ಧಿಸಿ ಸಮಾಜದ ಅತ್ಯಂತ ಕಡೆಗಣಿತ ವರ್ಗಗಳಿಗೆ ಸೇರಿದ ಇವರಿಗೆ ಸ್ವಯಂ ಉದ್ಯೋಗಗಳನ್ನು ಕಲ್ಪಿಸಲು ಈ ಯೋಜನೆಯಡಿ ನೆರವು ಒದಗಿಸುವುದು.

2. ಸ್ವಸಹಾಯ ಪರಸ್ಪರ ನೆರವಿನ ಗುಂಪುಗಳನ್ನು ಸ್ಥಾಪಿಸುವ ಮೂಲಕ ಅಂಗವಿಕಲತೆಗಳಿರುವ ವ್ಯಕ್ತಿಗಳ ಪ್ರತ್ಯೇಕತೆ ಹಾಗೂ ಏಕಾಂತತೆಯನ್ನು ತೊಡೆದು ಹಾಕುವುದು.
3. ಗ್ರಾಮ ಪಂಚಾಯಿತಿಯ ಮಟ್ಟದಲ್ಲಿ, ಗುಂಪು ಆದಾಯ ಉತ್ಪನ್ನ ವ್ಯಾಪಾರ/ವಹಿವಾಟಿನ ಮೇಲೆ ಗಮನವಿರಿಸಿ ಕಿರುಸಾಲದ ಗುಂಪುಗಳನ್ನು ಬಳಸುವ ಸುಸ್ಥಿರ ಸ್ಥಳೀಯವಾಗಿ ಸೂಕ್ತವಾದ ಆದಾಯ ಉತ್ಪನ್ನದ ಮೂಲಕ ಅಂಗವಿಕಲತೆ ಇರುವ ವ್ಯಕ್ತಿಗಳ ಸಶಕ್ತತೆ.
4. ಬ್ಲಾಕ್ ಮಟ್ಟದಲ್ಲಿ ಸ್ವತ್ತು ಸೃಷ್ಠಿ ಹಾಗೂ ಉದ್ಯೋಗ ಅವಕಾಶಗಳನ್ನು ಸೃಷ್ಠಿಸುವ ಚಟುವಟಿಕೆಗಳ ಉತ್ತೇಜನ.
5. ಗುಂಪುಗಳನ್ನು ವೃತ್ತಿಪರ ರೀತಿಯಲ್ಲಿ ನಿರ್ವಹಣೆ ಮಾಡುವ ಸಲುವಾಗಿ, ಸ್ವಸಹಾಯ ಗುಂಪಿನ ಸದಸ್ಯರಿಗೆ ತರಬೇತಿ ನೀಡಲು ಸರ್ಕಾರೇತರ ಸಂಸ್ಥೆಗಳಿಂದ ಜಿಲ್ಲಾ ಮಟ್ಟದ ಸಹಾಯಕರು/ಫೆಸಿಲಿಟೇರ್‌ಗಳಿಗೆ ತರಬೇತಿ ನೀಡುವುದು.
6. ಅಂಗವಿಕಲರ ಹಕ್ಕು ಹಾಗೂ ಸಾಮರ್ಥ್ಯ, ಹಾಗೂ ಅವರ ಸಶಕ್ತತೆಯಲ್ಲಿ ಸಮಾಜವು ವಹಿಸುವ ಪಾತ್ರವನ್ನು ಕುರಿತು ಪಂಚಾಯತ್ ರಾಜ್ಯ, ಬ್ಯಾಂಕುಗಳು, ಖಾಸಗಿ ವಲಯ, ಕಿರು ವ್ಯಾಪಾರಿಗಳಿಗೆ ಅರಿವಿನ ಕಾರ್ಯಕ್ರಮಗಳು ಹಾಗೂ ಸಮುದಾಯ ಸಂವೇದನಾ ಕಾರ್ಯಕ್ರಮಗಳ ಉತ್ತೇಜನ.
7. ಕಾರ್ಯಕ್ರಮದ ಸುಸ್ಥಿರತೆಗಾಗಿ ಸುತ್ತುನಿಧಿಯ ಸ್ಥಾಪನೆ.

11. **ಯೋಜನೆಯ ಅನುಷ್ಠಾನದಿಂದಾಗುವ ಪ್ರಯೋಜನಗಳು:**

ಈ ಯೋಜನೆಯಿಂದ ಅಂಗವಿಕಲರು ಸ್ವಾವಲಂಬಿಗಳಾಗಿ ಜೀವನ ನಡೆಸಲು ಅವಕಾಶ ಕಲ್ಪಿಸಿ, ಪ್ರತಿ ವರ್ಷ ಕನಿಷ್ಠ 1750 ಅಂಗವಿಕಲರಿಗೆ ಉದ್ಯೋಗಾವಕಾಶ ನೀಡಿದಂತಾಗುತ್ತದೆ.

ರಾಜ್ಯದ 30 ಜಿಲ್ಲೆಗಳ 176 ತಾಲ್ಲೂಕುಗಳ ಪೈಕಿ ಈಗಾಗಲೇ ಅನುಷ್ಠಾನಗೊಳಿಸಿರುವ 29 ತಾಲ್ಲೂಕುಗಳನ್ನು ಹೊರತುಪಡಿಸಿ 147 ತಾಲ್ಲೂಕುಗಳಲ್ಲಿ ಯೋಜನೆಯ ಅನುಷ್ಠಾನಕ್ಕೆ ತಗಲುವ ಅಂದಾಜು ವೆಚ್ಚದ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ತೋರಿಸಲಾಗಿದೆ.

ಸದರಿ ಯೋಜನೆಗೆ ಸಂಬಂಧಿಸಿದ ವೆಚ್ಚವನ್ನು ಲೆಕ್ಕಶೀರ್ಷಿಕೆ 2235–02–101–0–51 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 21 ಐಎಂಎಂ 2011, ದಿನಾಂಕ: 16–09–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಮಮಇ 143 ಪಿಎಚ್‌ಪಿ 2011**
**ದಿನಾಂಕ: 22–10–2011ಕ್ಕೆ ಅನುಬಂಧ**

| | | |
|---|---|---|
| 1 | ತರಬೇತಿ ಮಾರ್ಗಸೂಚಿಯನ್ನು ತಯಾರಿಸಲು ತಗಲುವ ವೆಚ್ಚ:<br>(ಸಾಮಗ್ರಿಗಳು ಹಾಗೂ ಮಾರ್ಗದರ್ಶಿ ಪುಸ್ತಕ ಜೊತೆ ಒಂದಕ್ಕೆ ರೂ. 250/– ರಂತೆ ಒಟ್ಟು 350 ಜೊತೆಗೆ) | 87,500 |
| 2 | ಒಂದು ದಿನದ ರಾಜ್ಯ ಮಟ್ಟದ ಸಜ್ಜುಗೊಳಿಸುವಿಕೆ<br>ಭಾಗವಹಿಸುವ ಒಟ್ಟು ಸದಸ್ಯರ ಸಂಖ್ಯೆ 105 | |
| | ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು 30 | |
| | ಸ್ವಯಂ ಸೇವಾ ಸಂಸ್ಥೆಗಳ ಪ್ರತಿನಿಧಿಗಳು ಜಿಲ್ಲೆಗೆ ಇಬ್ಬರಂತೆ 60 | |
| | ಕೇಂದ್ರ ಕಛೇರಿಯ ಸಿಬ್ಬಂದಿ 15 | |
| | ತರಬೇತಿ ಕೇಂದ್ರದ ಬಾಡಿಗೆ ಮೈಕ್ ಸೆಟ್‌ನೊಂದಿಗೆ | 25,000 |
| | ಊಟ ಮತ್ತು ಲಘು ಉಪಹಾರ ಒಬ್ಬರಿಗೆ ರೂ. 125 ರಂತೆ | 13,125 |
| | ಲೇಖನ ಸಾಮಗ್ರಿಗಳು ಒಬ್ಬರಿಗೆ ರೂ. 70 ರಂತೆ | 7,350 |
| | ಪ್ರಯಾಣ ಭತ್ಯೆ (ಭರಿಸಿರುವ ದರದಂತೆ) | 46,900 |
| | ಸಂಪನ್ಮೂಲ ವ್ಯಕ್ತಿಗಳಿಗೆ ಗೌರವಧನ (ಒಬ್ಬರಿಗೆ ರೂ. 1000/– ರಂತೆ ಐದು ಜನರಿಗೆ) | 5,000 |
| 3 | ಸ್ವಸಹಾಯ ಸಂಘದ ಸದಸ್ಯರಿಗೆ ಹಾಗೂ ಅವರ ಪೋಷಕರಿಗೆ ಪ್ರೇರೇಪಣಾ ತರಬೇತಿ–<br>ರೂ100 * 02 ದಿನ * 3700 ಸದಸ್ಯರಿಗೆ | 7,40,000 |
| 4 | ಗುಂಪಿಗೆ ನೀಡಲಾಗುವ ಲೇಖನ ಸಾಮಗ್ರಿ ಹಾಗೂ ಪೆಟ್ಟಿಗೆಗಳ ಖರೀದಿಗೆ<br>(ರೂ. 1000 * 147 ಗುಂಪುಗಳು) | 1,47,000 |
| 5 | ಸ್ವಸಹಾಯ ಗುಂಪುಗಳಿಗೆ ಸ್ಥಳೀಯವಾಗಿ ಕೌಶಲ್ಯ ತರಬೇತಿ<br>(12 ದಿವಸಗಳು * 1752 ಸದಸ್ಯರು * ರೂ 50) | 10,51,200 |
| 6 | ಅಂಗವಿಕಲರ ಹಕ್ಕುಗಳನ್ನು ತಿಳಿಯಲು ಹಾಗೂ ಅವರ ಸಾಮರ್ಥ ಬೆಳವಣಿಗೆಗೆ ಅಂಗವಿಕಲತೆ ಇರುವ ತಾಲ್ಲೂಕಿಗೆ 10 ಅಂಗವಿಕಲ ಸದಸ್ಯರಂತೆ 147 ತಾಲ್ಲೂಕುಗಳ 1470 ಸದಸ್ಯರಿಗೆ ಒಂದು ದಿನದ ತರಬೇತಿಗೆ (ರೂ. 50 * 1 ದಿನ * 1470 ಸದಸ್ಯರಿಗೆ) | 73,500 |

| | | |
|---|---|---|
| 7 | ಜಿಲ್ಲಾ ಸಂಪನ್ಮೂಲ ತಂಡಗಳ ಒಂದು ದಿನದ ತರಬೇತಿಗೆ (ರೂ. 200 * 1 ದಿನ * 60 ಸದಸ್ಯರಿಗೆ) {ಜಿಲ್ಲೆಗೆ ಇಬ್ಬರಂತೆ 30 ಜಿಲ್ಲೆಗಳಿಗೆ} | 12000 |
| | ಸ್ವಸಹಾಯ ಗುಂಪುಗಳು ಹಾಗೂ ಕಿರುಸಾಲಕ್ಕೆ ಸಮಾಲೋಚಕ ನೆರವಿಗೆ ಜಿಲ್ಲಾ ಮಟ್ಟದ ಒಂದು ದಿನದ ತರಬೇತಿಗೆ (147 ಗುಂಪಿನ ಸದಸ್ಯರಿಗೆ ಉಪಹಾರ, ಪ್ರಯಾಣ ಭತ್ಯೆ ಹಾಗೂ ಸಮಾಲೋಚಕರ (ಗೌರವಧನ) | 50000 |
| | ಸ್ವಯಂ ಸೇವಾ ಸಂಸ್ಥೆಗೆ ಮಾರ್ಗದರ್ಶಕರು ಹಾಗೂ ಪ್ರಯಾಣ ಭತ್ಯೆ ಜಿಲ್ಲೆಗೆ ಒಬ್ಬ ಸಂಚಾಲಕರು/ಮಾರ್ಗದರ್ಶಿ {(ರೂ. 6,000 ಗೌರವಧನ + 1000 ಪ್ರಯಾಣ ಭತ್ಯೆ) * 6 ತಿಂಗಳು * 30 ಜಿಲ್ಲೆಗಳು) | 12,60,000 |
| 8 | ಜಿಲ್ಲೆಗೆ ಒಬ್ಬ ಸ್ವಯಂ ಸೇವಕರು} | 10,80,000 |
| | {(ರೂ. 5000 ಗೌರವಧನ + 1000 ಪ್ರಯಾಣ ಭತ್ಯೆ) * 6 ತಿಂಗಳು * 30 ಜಿಲ್ಲೆಗಳು} | |
| 9 | ಜಿಲ್ಲಾ ಮಟ್ಟದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಕಛೇರಿ ನಿರ್ವಹಣೆ ವೆಚ್ಚ (ರೂ. 5500 * 30 ಜಿಲ್ಲೆಗಳು * 6 ತಿಂಗಳು) | 9,90,000 |
| 10 | ಸುತ್ತು ನಿಧಿ (ಒಂದು ಗುಂಪಿಗೆ ರೂ. 25,000 * 147 ಗುಂಪುಗಳು) | 36,75,000 |
| 11 | ಮಾರುಕಟ್ಟೆ ಸೌಲಭ್ಯಕ್ಕಾಗಿ (ಒಂದು ಗುಂಪಿಗೆ ರೂ. 5,000 * 145 ಗುಂಪುಗಳು) | 7,35,000 |
| | **ಒಟ್ಟು ರೂ.** | **99,98,575** |

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಪಿ.ಆರ್. ನಂ. 2600 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ನಿರ್ದಿಷ್ಟ ಗುರಿಯ ಸಾರ್ವಜನಿಕ ನಿತರಣಾ ಪದ್ಧತಿ (TPDS) ಯಡಿ ನ್ಯಾಯಬೆಲೆ ಅಂಗಡಿ, ಗ್ರಾಮ ಪಂಚಾಯತ್ ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಜಾಗೃತ ಸಮಿತಿಗಳ ರಚನೆಯ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ, 2001.
2. ಸರ್ಕಾರದ ಆದೇಶ ಸಂಖ್ಯೆ: ಆನಾಸ 34 ಡಿಆರ್ಎ 2003, ದಿನಾಂಕ : 04-04-2003.
3. ಕೇಂದ್ರ ಸರ್ಕಾರ ಹೊರಡಿಸಿರುವ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007).
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 20(2)/2009-PD. II, ದಿನಾಂಕ 22-12-2009.

**ಪ್ರಸ್ತಾವನೆ :**

ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS) ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ನ್ಯಾಯಬೆಲೆ ಅಂಗಡಿ, ಪಂಚಾಯತ್/ಮುನ್ಸಿಪಲ್ ಕೌನ್ಸಿಲ್/ ನಗರ ಪಾಲಿಕೆ ಹಂತಗಳಲ್ಲಿ, ಜಿಲ್ಲಾ, ಬ್ಲಾಕ್ ಮತ್ತು ರಾಜ್ಯ ಮಟ್ಟದಲ್ಲಿ ಜಾಗೃತ ಸಮಿತಿಗಳನ್ನು ರಾಜ್ಯ ಸರ್ಕಾರವು ರಚಿಸಬೇಕೆಂದು ಕೇಂದ್ರ ಸರ್ಕಾರವು ಹೊರಡಿಸಿರುವ ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007) ರ ಅಧ್ಯಾಯ -Iರ ಕಂಡಿಕೆ- XI ರಲ್ಲಿ ತಿಳಿಸಲಾಗಿರುತ್ತದೆ. ಈ ಬಗ್ಗೆ ಉಲ್ಲೇಖ (4)ರ ಕೇಂದ್ರ ಸರ್ಕಾರದ ಪತ್ರದಲ್ಲೂ ಪ್ರಸ್ತಾಪಿಸಲಾಗಿದೆ. ಹಾಗೆಯೇ ಸದರಿ ಜಾಗೃತ ಸಮಿತಿಗಳ ಸಭೆಗಳನ್ನು ನಿಯಮಿತವಾಗಿ ನಡೆಸುವ ಬಗ್ಗೆ ಉಲ್ಲೇಖ(1)ರ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ, 2001 (Public Distribution System (Control) Order, 2001] ರ ಅನುಬಂಧದ ಪ್ಯಾರ 6(3) ರಲ್ಲಿ ಷರತ್ತು ವಿಧಿಸಲಾಗಿರುತ್ತದೆ ಹಾಗೂ ಪ್ಯಾರ 6(8) ರಲ್ಲಿ ಕೇಂದ್ರ ಸರ್ಕಾರ ಹೊರಡಿಸಿರುವ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007)ರ ಆಧಾರದ ಮೇಲೆ ರಾಜ್ಯ ಸರ್ಕಾರವು ನಾಗರೀಕ ಸನ್ನದನ್ನು ಹೊರಡಿಸಿ, ಅಳವಡಿಸಿಕೊಳ್ಳಬೇಕೆಂದು ತಿಳಿಸಲಾಗಿರುತ್ತದೆ.

ಸರ್ಕಾರವು ಉಲ್ಲೇಖ(2) ರಂತೆ ನ್ಯಾಯಬೆಲೆ ಅಂಗಡಿಯ ಹಂತದ ಜಾಗೃತ ಸಮಿತಿಗಳನ್ನು ರಚಿಸಿ ಆದೇಶವನ್ನು ಹೊರಡಿಸಿರುತ್ತದೆ. ಅದರ ಬದಲಾಗಿ ನೂತನವಾಗಿ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಯ ಅಧ್ಯಕ್ಷರನ್ನು ನೇಮಿಸುವ ಮತ್ತು ಸದಸ್ಯರ ಸಂಖ್ಯೆಯನ್ನು ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007) ರಂತೆ ಪರಿಷ್ಕರಣೆ ಮಾಡಬೇಕಿದೆ. ಉಳಿದಂತೆ ಗ್ರಾಮ ಪಂಚಾಯತ್ ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು ಜಿಲ್ಲಾ ಮತ್ತು ರಾಜ್ಯ ಮಟ್ಟದ ಜಾಗೃತ ಸಮಿತಿಗಳನ್ನು ಹೊಸದಾಗಿ ರಚಿಸಬೇಕಿದೆ.

ಮೇಲೆ ಓದಲಾದ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಉಲ್ಲೇಖ (2)ರ ಸರ್ಕಾರದ ಆದೇಶವನ್ನು ನಿರಸನಗೊಳಿಸಿ ಅದರ ಬದಲಾಗಿ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಯನ್ನು ಪರಿಷ್ಕರಿಸಿ ರಚಿಸಲು ಹಾಗೂ ಗ್ರಾಮ ಪಂಚಾಯತ್ ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು ಜಿಲ್ಲಾ ಮತ್ತು ರಾಜ್ಯ ಮಟ್ಟದ ಜಾಗೃತ ಸಮಿತಿಗಳನ್ನು ಹೊಸದಾಗಿ ರಚಿಸಲು ಉದ್ದೇಶಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 148 ಡಿಆರ್ಎ 2010, ಬೆಂಗಳೂರು, ದಿನಾಂಕ : 29-10-2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS) ಯಡಿ ಪ್ರಸ್ತುತ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿ ರಚನೆಯ ಸಂಬಂಧ ಕೆಲವು ಬದಲಾವಣೆಗಳನ್ನು ಮಾಡಿ ಹಾಗೂ ಗ್ರಾಮ

ಪಂಚಾಯತ್ ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು ಜಿಲ್ಲಾ ಮತ್ತು ರಾಜ್ಯ ಮಟ್ಟದ ಜಾಗೃತ ಸಮಿತಿಗಳನ್ನು ರಚಿಸುವ ಸಂಬಂಧ, ಅವುಗಳ ಕಾರ್ಯನಿರ್ವಹಣೆಗಳಿಗೆ ಸಂಬಂಧಿಸಿದಂತೆ ಸರ್ಕಾರವು ಈ ಕೆಳಕಂಡಂತೆ ಕ್ರಮವಹಿಸಲು ಆದೇಶಿಸಿದೆ.

**1. ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿ:**

(ಅ) ಪ್ರಸ್ತುತ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಗೆ ಅಧ್ಯಕ್ಷರ ನೇಮಕ ಮತ್ತು ಸದಸ್ಯರ ಸಂಖ್ಯೆಯು ಈ ಕೆಳಕಂಡಂತೆ ಇರತಕ್ಕದ್ದು, ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| (i) | ಗ್ರಾಮ ಪಂಚಾಯತ್ ಅಧ್ಯಕ್ಷರು | –ಅಧ್ಯಕ್ಷರು |
| (ii) | ನ್ಯಾಯಬೆಲೆ ಅಂಗಡಿ ವ್ಯಾಪ್ತಿಯಲ್ಲಿನ ಇಬ್ಬರು ಗ್ರಾಮ ಪಂಚಾಯಿತಿ ಸದಸ್ಯರು | –2 ಜನ ಸದಸ್ಯರು |
| (iii) | 3 ಜನ BPL/AAY ಪಡಿತರ ಚೀಟಿದಾರರು– (ಮೂರು ಮಹಿಳಾ ಸದಸ್ಯರಿರಬೇಕು ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ಪಂಗಡ ಹಾಗೂ ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿದವರಿರಬೇಕು) | –3 ಜನ ಸದಸ್ಯರು |
| (iv) | ಒಬ್ಬ ಸಮಾಜ ಸೇವಾಕಾರ್ಯಕರ್ತರು ಅಥವಾ ಸ್ಥಳೀಯ ಮಹಿಳಾ ಸ್ವಸಹಾಯ ಗುಂಪಿನ ಅಧ್ಯಕ್ಷರು ಅಥವಾ ಸ್ತ್ರೀ ಶಕ್ತಿ ಗುಂಪಿನ ಅಧ್ಯಕ್ಷ ಸದಸ್ಯರಿರಬೇಕು. | –ಒಬ್ಬ ಸದಸ್ಯರು |
| (V) | ಗ್ರಾಮ ಪಂಚಾಯತ್‌ನ ಬಿಲ್ ಕಲೆಕ್ಟರ್ | –ಸದಸ್ಯ ಕಾರ್ಯದರ್ಶಿ |

(ಆ)ಸಭೆಯನ್ನು ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರು ನಡೆಸಬೇಕು ತಿಂಗಳ ಮೊದಲನೇ ವಾರದಲ್ಲಿ ಸಭೆ ನಡೆಸತಕ್ಕದ್ದು.

**2. ಗ್ರಾಮ ಪಂಚಾಯತ್ ಮಟ್ಟದ ಜಾಗೃತ ಸಮಿತಿ :**

(ಅ)ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007)ರ ಸೂಚನೆಯಂತೆ ಗ್ರಾಮ ಪಂಚಾಯತ್ ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| (i) | ಗ್ರಾಮ ಪಂಚಾಯತಿಯ ಅಧ್ಯಕ್ಷರು | –ಅಧ್ಯಕ್ಷರು |
| (ii) | ಗ್ರಾಮ ಪಂಚಾಯತಿಯ ಉಪಾಧ್ಯಕ್ಷರು | – ಸದಸ್ಯರು |
| (iii) | 3 ಜನ BPL/AAY ಪಡಿತರ ಚೀಟಿದಾರರು– (ಮೂರು ಮಹಿಳಾ ಸದಸ್ಯರಿರಬೇಕು, ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ವರ್ಗ ಹಾಗೂ ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು) | –3 ಜನ ಸದಸ್ಯರು |
| (iv) | ಇಬ್ಬರು ಗ್ರಾಮ ಪಂಚಾಯತಿಯ ಸದಸ್ಯರು | – 2 ಜನ ಸದಸ್ಯರು |
| (V) | ಒಬ್ಬ ಸಮಾಜ ಸೇವಾ ಕಾರ್ಯಕರ್ತರು, ಅಥವಾ ಸ್ಥಳೀಯ ಮಹಿಳಾ ಸ್ವಸಹಾಯ ಗುಂಪಿನ ಅಧ್ಯಕ್ಷರು ಅಥವಾ ಸ್ತ್ರೀಶಕ್ತಿ ಗುಂಪಿನ ಅಧ್ಯಕ್ಷ ಸದಸ್ಯರಿರಬೇಕು | – ಸದಸ್ಯರು |
| (vi) | ಗ್ರಾಮ ಪಂಚಾಯತಿಯ ಕಾರ್ಯದರ್ಶಿ | – ಸದಸ್ಯ ಕಾರ್ಯದರ್ಶಿ |

(ಆ)ಸಭೆಯನ್ನು ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರು ನಡೆಸಬೇಕು ತಿಂಗಳ ಮೊದಲನೇ ವಾರದಲ್ಲಿ ಸಭೆ ನಡೆಯತಕ್ಕದ್ದು.

**3. ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ ನಗರ ಪಾಲಿಕೆಗಳ ವಾರ್ಡ್ ಹಂತದ ಜಾಗೃತ ಸಮಿತಿ.**

(ಅ)ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007)ರ ಸೂಚನೆಯಂತೆ ಪಟ್ಟಣ ಪಂಚಾಯತ್/ ಪುರಸಭೆ/ನಗರಸಭೆ/ನಗರ ಪಾಲಿಕೆಗಳ ವಾರ್ಡ್ ಹಂತದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| (i) | ಪಟ್ಟಣ ಪಂಚಾಯತಿ/ಪುರಸಭೆ/ನಗರ ಪಾಳಿಕೆ ಅಧ್ಯಕ್ಷರು | –ಅಧ್ಯಕ್ಷರು |
| (ii) | ಪಟ್ಟಣ ಪಂಚಾಯತಿ/ಪುರಸಭೆ/ನಗರ ಪಾಲಿಕೆ ಉಪಾಧ್ಯಕರು | – ಸದಸ್ಯರು |
| (iii) | ಪಾಲಿಕೆ ವಾರ್ಡ್‌ನಲ್ಲಿ ಆಯ್ಕೆಯಾದ ಒಬ್ಬ ಸದಸ್ಯರು | – ಸದಸ್ಯರು |
| (iv) | 3 ಮಂದಿ BPL/AAY ಪಡಿತರ ಚೀಟಿದಾರರು– (ಮೂರು ಮಹಿಳಾ ಸದಸ್ಯರಿರಬೇಕು, ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ವರ್ಗ ಹಾಗೂ ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು) | –3 ಜನ ಸದಸ್ಯರು |

(v) ಸಮಾಜ ಸೇವಾ ಕಾರ್ಯಕರ್ತರು/ಸ್ತ್ರೀಶಕ್ತಿ ಸಂಘದ ಅಧ್ಯಕ್ಷರು/ಸ್ವಸಹಾಯ ಗುಂಪಿನ ಅಧ್ಯಕ್ಷರು/ ಗ್ರಾಹಕರ ಹಿತರಕ್ಷಣಾ ಸಮಿತಿಯ ಅಧ್ಯಕ್ಷರು –2 ಜನ ಸದಸ್ಯರು

(vi) ಪುರಸಭೆ/ನಗರ ಸಭೆ/ನಗರ ಪಾಲಿಕೆ ವಾರ್ಡ್ ಸಂಬಂಧಪಟ್ಟ ವಾರ್ಡ್‌ನ ಕಂದಾಯ ನಿರೀಕ್ಷಕರು –ಸದಸ್ಯ ಕಾರ್ಯದರ್ಶಿ

(ಆ) ಸಭೆಯನ್ನು ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರು ನಡೆಸಬೇಕು ತಿಂಗಳ ಮೊದಲನೇ ವಾರದಲ್ಲಿ ಸಭೆ ನಡೆಯತಕ್ಕದ್ದು.

**4. ನ್ಯಾಯಬೆಲೆ ಅಂಗಡಿ ಮಟ್ಟದ, ಗ್ರಾಮ ಪಂಚಾಯತ್ ಮಟ್ಟದ ಪಟ್ಟಣ ಪಂಚಾಯತ್/ ಪುರಸಭೆ/ ನಗರಸಭೆ/ನಗರ ಪಾಲಿಕೆಗಳ ವಾರ್ಡ್ ಹಂತದ ಜಾಗೃತ ಸಮಿತಿಯ ಕಾರ್ಯ, ಜವಾಬ್ದಾರಿ ಈ ಕೆಳಕಂಡಂತಿರುತ್ತದೆ.**

(i) ನ್ಯಾಯಬೆಲೆ ಅಂಗಡಿಯವರು ನಿಗದಿತ ವೇಳೆಯಲ್ಲಿ ಬಾಗಿಲನ್ನು ತೆರೆದು ಪಡಿತರ ವಿತರಣೆ ಕಾರ್ಯವನ್ನು ನಿರ್ವಹಿಸುತ್ತಿರುವರೇ ? ನಿಗದಿಪಡಿಸಿರುವ ಸಮಯದಂತೆ ಕಾರ್ಯ ನಿರ್ವಹಿಸುತ್ತಿರುವರೇ ?

(ii) ನ್ಯಾಯಬೆಲೆ ಅಂಗಡಿ ಮಾಲೀಕರು ಮಾಹೆಯಾನ ಅವರಿಗೆ ಹಂಚಿಕೆ ಮಾಡಿರುವ ದಾಸ್ತಾನನ್ನು ನಿಗದಿತ ಸಮಯದಲ್ಲಿ ಎತ್ತುವಳಿ ಮಾಡುತ್ತಿರುವರೇ?

(iii) ನ್ಯಾಯಬೆಲೆ ಅಂಗಡಿಯವರು ಪಡಿತರ ವಸ್ತುಗಳನ್ನು ನಿಗದಿತ ದರ ಹಾಗೂ ನಿಗದಿತ ಪ್ರಮಾಣದಲ್ಲಿ ವಿತರಿಸುತ್ತಿರುವರೇ ?

(iv) ನ್ಯಾಯಬೆಲೆ ಅಂಗಡಿಯಲ್ಲಿ ಅಗತ್ಯ ಪ್ರಮಾಣದ ಅಹಾರಧಾನ್ಯಗಳನ್ನು ಮಾಹೆಯ ಎಲ್ಲಾ ದಿನಗಳಲ್ಲೂ ಪಡಿತರ ಚೀಟಿದಾರರಿಗೆ ಲಭ್ಯವಾಗುವಂತೆ ನಿರ್ವಹಿಸುತ್ತಿರುವರೇ ?

(v) ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸಲಾಗುತ್ತಿರುವ ಅಹಾರಧಾನ್ಯಗಳ ಗುಣಮಟ್ಟವು ತೃಪ್ತಿಕರವಾಗಿದೆಯೇ?

(vi) ನ್ಯಾಯಬೆಲೆ ಅಂಗಡಿಯವರು ಉಪಯೋಗಿಸುತ್ತಿರುವ ತೂಕ ಮತ್ತು ಅಳತೆಯ ಬೊಟ್ಟುಗಳನ್ನು ಅಳತೆ ಮತ್ತು ತೂಕ ಮಾಪನ ಇಲಾಖೆಯಿಂದ ದೃಢೀಕರಿಸಿಕೊಳ್ಳಲಾಗಿದೆಯೇ ?

(vii) ನ್ಯಾಯಬೆಲೆ ಅಂಗಡಿ ವ್ಯಾಪ್ತಿಯ ಪಡಿತರ ಚೀಟಿದಾರರು ಪಡಿತರವನ್ನು ಪಡೆದುಕೊಳ್ಳುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳೇನಾದರೂ ಇದ್ದರೆ ಅಂತಹ ಸಮಸ್ಯೆಗಳ ಬಗ್ಗೆಯೂ ಪರಿಶೀಲಿಸುವುದು.

(viii) ನ್ಯಾಯಬೆಲೆ ಅಂಗಡಿಯವರು ಎಲ್ಲಾ ಮಾಹಿತಿಗಳನ್ನೊಳಗೊಂಡಂತೆ ಲಭ್ಯವಿರುವ ದಾಸ್ತಾನು, ದರ ಮತ್ತು ವಿತರಣಾ ಪ್ರಮಾಣ ಸೂಚಿಸುವ ವಿವರಗಳುಳ್ಳ ಫಲಕವನ್ನು ಹಾಗೂ ಪಡಿತರ ವಿತರಣೆಯ ಸಮಯವನ್ನು ಪ್ರದರ್ಶಿಸಿರುವರೇ?

(ix) ನ್ಯಾಯಬೆಲೆ ಅಂಗಡಿಯವರು ವಿತರಿಸಿದ ಪ್ರಮಾಣಕ್ಕೆ ಪಡಿತರ ಚೀಟಿದಾರರಿಗೆ ಬಿಲ್ಲನ್ನು ನೀಡುತ್ತಿರುವರೇ?
– ಎಂಬುವುದರ ಬಗ್ಗೆ ಪರಿಶೀಲಿಸಿ ಸರಿಪಡಿಸುವುದು.

(x) ನ್ಯಾಯಬೆಲೆ ಅಂಗಡಿಗಳಲ್ಲಿನ ಲೋಪದೋಷಗಳು ಏನಾದರೂ ಇದ್ದಲ್ಲಿ, ಅದರ ಬಗ್ಗೆ ವರದಿಯನ್ನು ಸಮಿತಿಯ ಸದಸ್ಯ ಕಾರ್ಯದರ್ಶಿಯವರು ಸಂಬಂಧಪಟ್ಟ ತಹಶೀಲ್ದಾರರಿಗೆ ಸಲ್ಲಿಸುವುದು.

(xi) ಸಮಿತಿಯು ನಡವಳಿ ವಹಿಯನ್ನು ನಿರ್ವಹಿಸತಕ್ಕದ್ದು ಮತ್ತು ಪ್ರತಿ ಸಭೆ ಪಡೆದ ಒಂದು ವಾರದೊಳಗೆ ಸಂಬಂಧಪಟ್ಟ ತಹಶೀಲ್ದಾರ್‌ರವರಿಗೆ ಸಭೆಯ ಪಡವಳಿಯನ್ನು ಸಲ್ಲಿಸತಕ್ಕದ್ದು. ತಹಶೀಲ್ದಾರ್‌ರವರು ಕ್ರೋಢಿಕೃತ ವರದಿಯನ್ನು ತಾಲ್ಲೂಕು ಮಟ್ಟದ ಜಾಗೃತ ಸಮಿತಿಯಲ್ಲಿ ಚರ್ಚಿಸಿ ಸೂಕ್ತ ಕ್ರಮವಹಿಸುವುದು.

**5. ತಾಲ್ಲೂಕು ಮಟ್ಟದ ಜಾಗೃತ ಸಮಿತಿ:**

(ಅ) ಉಲ್ಲೇಖ (3)ರಲ್ಲಿ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007)ರ ಸೂಚನೆಯಂತೆ ತಾಲ್ಲೂಕು ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

(i) ಅಧ್ಯಕ್ಷರು, ತಾಲ್ಲೂಕು ಪಂಚಾಯತ್ –ಅಧ್ಯಕ್ಷರು

(ii) ಅಧ್ಯಕ್ಷರು ತಾಲ್ಲೂಕು ಕೇಂದ್ರದ ಪುರಸಭೆ, ಪಟ್ಟಣ ಪಂಚಾಯತ್ – ಸದಸ್ಯರು

(iii) ಉಪಾಧ್ಯಕ್ಷರು, ತಾಲ್ಲೂಕು ಪಂಚಾಯತ್ – ಸದಸ್ಯರು

(iv) ಉಪಾಧ್ಯಕ್ಷರು, ತಾಲ್ಲೂಕು ಕೇಂದ್ರದ ಪುರ ಸಭೆ ಪಟ್ಟಣ ಪಂಚಾಯತ್ – ಸದಸ್ಯರು

(v) ತಾಲ್ಲೂಕಿನ ಎಲ್ಲಾ ಹೋಬಳಿ, ಪಟ್ಟಣಗಳಿಂದ ತಲಾ ಒಬ್ಬರಂತೆ AAY/BPL ಪಡಿತರ ಚೀಟಿದಾರರು– (ಇವರಲ್ಲಿ ಮೂವರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗದ ಮಹಿಳೆಯರು ಕಡ್ಡಾಯವಾಗಿ ಇರತಕ್ಕದ್ದು) –6 ಮಂದಿ ಸದಸ್ಯರು

(vi) ಸಾಮಾಜಿಕ ಕಾರ್ಯಕರ್ತರು –ಇಬ್ಬರು ಸದಸ್ಯರು

(vii) ಕರ್ಯನಿರ್ವಾಹಕ ಅಧಿಕಾರಿಗಳು – ಸದಸ್ಯರು

(viii) ತಹಸೀಲ್ದಾರರು –ಸದಸ್ಯ ಕಾರ್ಯದರ್ಶಿಗಳು

(ಅ) ತಾಲ್ಲೂಕಿನ ಎಲ್ಲಾ ನ್ಯಾಯಬೆಲೆ ಅಂಗಡಿಗಳ ವ್ಯಾಪ್ತಿಯನ್ನು ಸಮಿತಿಯು ಒಳಗೊಂಡಿದ್ದು ಪಡಿತರ ಪದಾರ್ಥಗಳನ್ನು ಸೋರಿಕೆಯಾಗದಂತೆ ಪಲಾನುಭವಿ ಪಡಿತರ ಚೀಟಿದಾರರಿಗೆ ತಲುಪಿಸುವಿಕೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು, ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆ ಹಾಗೂ ಅವುಗಳಿಗೆ ಸಂಬಂಧಿಸಿದ ಇತರೆ ಸಮಸ್ಯೆಗಳ ಬಗ್ಗೆ ಜಿಲ್ಲಾಮಟ್ಟದ ಜಾಗೃತ ಸಮಿತಿಗೆ ವರದಿ ಮಾಡತಕ್ಕದ್ದು.

(ಇ) ತಾಲ್ಲೂಕು ಮಟ್ಟದ ಜಾಗೃತ ಸಮಿತಿ ಸಭೆಯನ್ನು ಪ್ರತಿ ತಿಂಗಳು ನಿಯತಕಾಲಿಕವಾಗಿ ನಡೆಸತಕ್ಕದ್ದು, ಅದು ಪ್ರತಿ ತಿಂಗಳ ಮೊದಲ ವಾರದಲ್ಲಿ ನಡೆಯತಕ್ಕದ್ದು.

**6. ಜಿಲ್ಲಾ ಮಟ್ಟದ ಜಾಗೃತ ಸಮಿತಿ:**

(ಅ) ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007)ರ ಸೂಚನೆಯಂತೆ ಜಿಲ್ಲಾ ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ರಾಜ್ಯ ಸರ್ಕಾರವು ರಚಿಸುವುದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| (i) | ಅಧ್ಯಕ್ಷರು, ಜಿಲ್ಲಾ ಪಂಚಾಯತ್ | –ಅಧ್ಯಕ್ಷರು |
| (ii) | ಜಿಲ್ಲಾಧಿಕಾರಿಗಳು | – ಸದಸ್ಯರು |
| (iii) | ಮುಖ್ಯಕಾರ್ಯನಿರ್ವಹಣಾಧಿಕಾರಿಗಳು | – ಸದಸ್ಯರು |
| (iv) | ಜಿಲ್ಲಾ ಕೇಂದ್ರದ ನಗರ ಸಭೆ ಅಧ್ಯಕ್ಷರು | – ಸದಸ್ಯರು |
| (v) | ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು | – ಸದಸ್ಯರು |
| (vi) | ಜಿಲ್ಲಾ ಕೇಂದ್ರದ ನಗರ ಸಭೆಯ ಉಪಾಧ್ಯಕ್ಷರು | – ಸದಸ್ಯರು |
| (vii) | ಮೂರು ಮಂದಿ ಫಲಾನುಭವಿ ಪಡಿತರ ಚೀಟಿದಾರರು (ಇವರಲ್ಲಿ ಕ್ರಮವಾಗಿ ಒಬ್ಬರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿರತಕ್ಕದ್ದು) | – ಮೂರು ಸದಸ್ಯರು |
| (viii) | ಇಬ್ಬರು ಸಾಮಾಜಿಕ ಕಾರ್ಯಕರ್ತರು–ಗ್ರಾಹಕ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವವರು | – ಇಬ್ಬರು ಸದಸ್ಯರು |
| (ix) | ಉಪ ನಿರ್ದೇಶಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ | – ಸದಸ್ಯ ಕಾರ್ಯದರ್ಶಿ |

(ಅ) ಜಿಲ್ಲಾ ಮಟ್ಟದ ಜಾಗೃತ ಸಮಿತಿಯು ತನ್ನ ಹಂತದಲ್ಲೇ ಸಮಸ್ಯೆಗಳನ್ನು ಬಗೆಹರಿಸಲು/ಪರಿಹಾರ ಕಂಡುಕೊಳ್ಳಲು ಅಧಿಕಾರ ಹೊಂದಿರುತ್ತದೆ. ಹಾಗೆ ಸಾಧ್ಯವಾಗದಿದ್ದಲ್ಲಿ, ತನ್ನ ಶಿಫಾರಸ್ಸಿನೊಂದಿಗೆ ರಾಜ್ಯಮಟ್ಟದ ಜಾಗೃತ ಸಮಿತಿಗೆ ಕಳುಹಿಸತಕ್ಕದ್ದು.

(ಇ) ಜಿಲ್ಲಾಮಟ್ಟದ ಜಾಗೃತ ಸಮಿತಿ ಸಭೆಯನ್ನು ನಿಯತಕಾಲಿಕವಾಗಿ ಪ್ರತಿ ತಿಂಗಳು ನಡೆಸತಕ್ಕದ್ದು. ಸಭೆಯು ಪ್ರತಿ ತಿಂಗಳ ಮೊದಲ ವಾರದಲ್ಲಿ ನಡೆಯತಕ್ಕದ್ದು.

**7. ರಾಜ್ಯ ಮಟ್ಟದ ಜಾಗೃತ ಸಮಿತಿ :**

(ಅ) ಉಲ್ಲೇಖ (3)ರಲ್ಲಿ ಪರಿಷ್ಕೃತ ಮಾದರಿ ನಾಗರೀಕ ಸನ್ನದು (ಜುಲೈ 2007)ರ ಸೂಚನೆಯಂತೆ ರಾಜ್ಯ ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಜಾಗೃತ ಸಮಿತಿಯನ್ನು ರಾಜ್ಯ ಸರ್ಕಾರವು ರಚಿಸುವುದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| (i) | ಸಚಿವರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಕರ್ನಾಟಕ ಸರ್ಕಾರ | –ಅಧ್ಯಕ್ಷರು |
| (ii) | ಮೂರು ಜನ ಲೋಕಸಭಾ ಸದಸ್ಯರು | – ಮೂರು ಸದಸ್ಯರು |
| (iii) | ಮೂರು ಜನ ವಿಧಾನಸಭಾ ಸದಸ್ಯರು | – ಮೂರು ಸದಸ್ಯರು |
| (iv) | ಗ್ರಾಹಕ ಕಲ್ಯಾಣ ಸಂಸ್ಥೆಯ ಸದಸ್ಯರು | – ಇಬ್ಬರು ಸದಸ್ಯರು |
| (v) | ಯುವಕ ಸಂಘಟನೆಯ ಸದಸ್ಯರು | – ಇಬ್ಬರು ಸದಸ್ಯರು |
| (vi) | ಮಹಿಳಾ ಸಂಘಟನೆಯ ಸದಸ್ಯರು | – ಇಬ್ಬರು ಸದಸ್ಯರು |
| (vii) | ಸರ್ಕಾರದ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | – ಸದಸ್ಯರು |
| (viii) | ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | – ಸದಸ್ಯರು |
| (ix) | ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | – ಸದಸ್ಯರು |
| (x) | ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | – ಸದಸ್ಯ ಕಾರ್ಯದರ್ಶಿ |

(ಆ) ರಾಜ್ಯದಲ್ಲಿ TPDS ಕಾರ್ಯಕ್ರಮದ ಎಲ್ಲಾ ಕಾರ್ಯಚಟುವಟಿಕೆ, ಸಮರ್ಪಕ ಕಾರ್ಯನಿರ್ವಹಣೆಯಲ್ಲಿ ಯಾವುದಾದರೂ ತೊಂದರೆಗಳು ಎದುರಾಗಿದ್ದರೆ ಅವುಗಳ ಬಗ್ಗೆ ಸಮಿತಿಯು ತ್ರೈಮಾಸಿಕವಾಗಿ ಸಭೆ ಸೇರಿ ಪರಿಶೀಲಿಸತಕ್ಕದ್ದು.

(ಇ) ಸಮಿತಿ/ಅದರ ಸದಸ್ಯರು ನ್ಯಾಯಬೆಲೆ ಅಂಗಡಿಗಳ ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಕಛೇರಿಗಳಿಗೆ ಭೇಟಿ ನೀಡಬಹುದು ಹಾಗೂ ಕಾರ್ಯಕ್ರಮದ ಫಲಾನುಭವಿಗಳನ್ನು ಭೇಟಿ ಮಾಡಬಹುದು ಮತ್ತು TPDS ಅನುಷ್ಠಾನದಲ್ಲಿರುವ ಯಾವುದೇ ಸಮಸ್ಯೆಗಳಿಗೆ ಪರಿಹಾರ ಕ್ರಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡಬಹುದು.

(ಈ) ಯಾವುದೇ ಸಮಸ್ಯೆಗಳ ಮೇಲಿನ ಸಮಿತಿಯ ನಿರ್ಧಾರವು ಕೇಂದ್ರ ಸರ್ಕಾರದ ಪರಿವ್ಯಾಪ್ತಿಯಲ್ಲಿದ್ದರೆ, ರಾಜ್ಯಮಟ್ಟದ ಜಾಗೃತ ಸಮಿತಿಯು ಪರಿಹಾರ ಕ್ರಮದ ಶಿಫಾರಸ್ಸನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಬಹುದು.

(ಉ) ತಾಲ್ಲೂಕು, ಜಿಲ್ಲಾ ರಾಜ್ಯಮಟ್ಟದ ಜಾಗೃತ ಸಮಿತಿಗಳು ಗುರುತಿಸಿದ ಸಮಸ್ಯೆಗಳನ್ನು ಪರಿಹರಿಸಲು ರಾಜ್ಯ ಸರ್ಕಾರವು ಒಂದು ವ್ಯವಸ್ಥೆಯನ್ನು ಅನುಷ್ಠಾನಗೊಳಿಸತಕ್ಕದ್ದು.

(ಊ) ರಾಜ್ಯ ಮಟ್ಟದ ಜಾಗೃತ ಸಮಿತಿ ಸಭೆಯನ್ನು ನಿಯತಕಾಲಿಕವಾಗಿ ನಡೆಸತಕ್ಕದ್ದು. ಸಭೆಯ ದಿನಾಂಕ ಮತ್ತು ಒಂದು ಸಭೆಯಿಂದ ಇನ್ನೊಂದು ಸಭೆಗೂ ಇರಬೇಕಾದ ಕಾಲಾವಧಿಯನ್ನು ರಾಜ್ಯ ಸರ್ಕಾರವು ಅಧಿಸೂಚಿಸತಕ್ಕದ್ದು. ಆದಾಗ್ಯೂ, ಒಂದು ತ್ರೈಮಾಸಿಕ ಅವಧಿಯಲ್ಲಿ ಕನಿಷ್ಠ ಒಂದಾದರೂ ಸಭೆ ಜರುಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಡಗಾವೆ ಬಸವರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ
(ಆಹಾರ 1 & 2)

ಪಿ.ಆರ್. 2601

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಎನ್. ಸುಭಾಷ್ ಚಂದ್ರ, ಪಿ.ಎಸ್.ಐ (ಸಿವಿಲ್) ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: 09/ಸಿಬ್ಬಂದಿ–1/2010–11 ದಿನಾಂಕ: 19–11–2010 ಮತ್ತು 09–09–2011.

**ಪ್ರಸ್ತಾವನೆ:**

ಶ್ರೀ ಸುಭಾಷ್ ಚಂದ್ರ, ಪಿ.ಎಸ್.ಐ, ಮಡಿವಾಳ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸೇವಾನಿರತ ಪಿ.ಎಸ್.ಐ. ಆಗಿ ದಿನಾಂಕ 15–12–2003 ರಂದು ನೇಮಕಾತಿ ಹೊಂದಿದ್ದು, ಸದರಿಯವರ 2 1/2 ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ 15–06–2006ಕ್ಕೆ ಪೂರ್ಣಗೊಳ್ಳುತ್ತದೆ. ಸದರಿಯವರು ಹುದ್ದೆಗೆ ಸಂಬಂಧಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಆದರೆ ಸದರಿಯವರ ವಿರುದ್ಧ ಚಾಲ್ತಿ ಶಿಕ್ಷೆ ಇದ್ದುದರಿಂದ, ನೇಮಕಾತಿ ಪ್ರಾಧಿಕಾರವು ಕೆ.ಸಿ.ಎಸ್. (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 4(1)(ii) ರನ್ವಯ ಖಾಯಂಪೂರ್ವ ಅವಧಿಯನ್ನು ದಿನಾಂಕ 15–06–2006 ರಿಂದ 14–09–2007 ರವರೆಗೆ 1ವರ್ಷ 3 ತಿಂಗಳ ಅವಧಿಗೆ ವಿಸ್ತರಿಸಿರುತ್ತದೆ.

ಸದರಿಯವರ ವಿರುದ್ಧ ಇರುವ ಶಿಕ್ಷೆಯು ದಿನಾಂಕ 30–07–2012ಕ್ಕೆ ಪೂರ್ಣಗೊಳ್ಳುತ್ತದೆ ಹಾಗೂ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4 ಮತ್ತು 5(1) ರನ್ವಯ ಸದರಿಯವರು ಹೊಂದಿರುವ ಹುದ್ದೆಯ ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಿರುತ್ತಾರೆ. ಆದ್ದರಿಂದ ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ 15–09–2007 ರಿಂದ 30–07–2012 ರವರೆಗೆ ಕೆ.ಸಿ.ಎಸ್.(ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(i) ರನ್ವಯ ವಿಸ್ತರಿಸುವಂತೆ ಮೇಲೆ ಓದಲಾದ (1) ರ ಪತ್ರಗಳಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 26 ಪೊಸಇ 2011 ಬೆಂಗಳೂರು, ದಿನಾಂಕ: 21–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i)ರನ್ವಯ ಶ್ರೀ ಸುಭಾಷ್ ಚಂದ್ರ, ಪಿ.ಎಸ್.ಐ. ಮಡಿವಾಳ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 15–09–2007 ರಿಂದ 30–07–2012ರವರೆಗೆ ವಿಸ್ತರಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. ನಂ.2602